ಮಣಿಮಾನ್ ನಾಮಕ ದೈತ್ಯನ ಅವತಾರ ಎಂದು ನಿರೂಪಿಸಿರುವ ಶ್ರೀ ಮನ್ನಾರಾಯಣ ಪಂಡಿತಾಚಾರ್ಯರ "ಮಣಿಮಂಜರಿ"ಯನ್ನು ನಿರಾಕರಿಸಲು ಪ್ರಯತ್ನಿಸಲಾಗಿದೆ. ಆ ಸಂದರ್ಭದಲ್ಲಿ ಅವಾಚ್ಯ ಶಬ್ದ ಪ್ರಯೋಗಗಳನ್ನೂ ಹಾಗೆಯೇ ಶ್ರೀ ಮಧ್ವರ ದೈತ್ಯತ್ವ ಕಥನವನ್ನು ಜೋಡಿಸಿದೆ. ಆ ವಿಷಯದಲ್ಲಿ ಅನೇಕ ತಾಮಸ ಪುರಾಣಗಳ ಮೋಹಕ ವಾಕ್ಯಗಳ ಉದಾಹರಣೆಯನ್ನು ಕೊಡಲಾಗಿದೆ.

ಮೊದಲು ಶಂಕರಾಚಾರ್ಯರ ಸ್ವರೂಪವಿಷಯದ ಬಗ್ಗೆ ವಿಚಾರ ಮಾಡಿದಾಗ, ಅವರ ಸ್ವರೂಪದ ಬಗ್ಗೆ ವಿರುದ್ಧವಾಗಿ ಹೇಳುವ ಪುರಾಣವಾಕ್ಯಗಳು ನಮಗೆ ಕಂಡುಬರುತ್ತವೆ.

ಪದ್ಮಪುರಾಣವು ಶಂಕರರು ಮಣಿಮಂತ ನಾಮಕ ದೈತ್ಯನೆಂದು ಹೇಳಿದರೆ ಭವಿಷ್ಯ ಪುರಾಣವು ಅವರು ರುದ್ರದೇವರ ಅವತಾರವೆಂದು ಹೇಳಿದೆ. "ಶ್ರೀ ಸುಮಧ್ವವಿಜಯ" ಹಾಗೂ "ಮಣಿಮಂಜರಿ" ಗ್ರಂಥಗಳು ಅವರು ದೈತ್ಯರೆಂದು ಹೇಳಿದರೆ "ಶಂಕರವಿಜಯ"ಗಳು ಅವರನ್ನು ಶಂಕರಾವತಾರರೆಂದು ಸಾರುತ್ತಿವೆ.

**"ದೇವೋ ವಾ ದಾನವೋ ವಾ ಸ್ಯಾತ್ ಭಾಷ್ಯಕಾರೋ ನ ಮಾನವಃ"**

ಎಂಬ ವಾಕ್ಯಾನುಸಾರವಾಗಿ ಆ ಪ್ರಮಾಣಗಳನ್ನೇ ಸ್ವಲ್ಪ ಆಲೋಚಿಸೋಣ. ಶಂಕರರು ಶಿವಾವತಾರವೆಂದರೆ ಪದ್ಮಪುರಾಣ ವಿರೋಧ ಬರುತ್ತದೆ. ಪರಮಮಂಗಳಕರನಾದ ಶಿವನಿಗೆ ದೈತ್ಯತ್ವ ಅಸಂಭವವಾಗಿರುವುದರಿಂದ ಶಂಕರರು ಶಂಕರಾವತಾರ ಎನ್ನುವುದು ಪ್ರಮಾಣ ವಿರೋಧ. ಆದ್ದರಿಂದ ಶಂಕರರು ತಾವು ಜನಿಸುವ ಮುಂಚೆ ಶಿವನನ್ನು ಕುರಿತು ಬಹುಕಾಲ ಮಾಡಿದ ತಪಸ್ಸಿನಿಂದ ತುಷ್ಟನಾದ ಶಿವನ ಅನುಗ್ರಹದಿಂದ, ವರಬಲದಿಂದ ಜನಿಸಿದರು ಎಂದು ಹೇಳಿದರೆ, ಅವರ ಶಂಕರಾವತಾರವನ್ನು ಹೇಳುವ ಪ್ರಮಾಣಗಳಿಂದ ವಿರೋಧ ಬರುವುದಿಲ್ಲ. ಆದ್ದರಿಂದಲೇ ಸ್ಕಾಂದ ಪುರಾಣದಲ್ಲಿ "**ಮಮಾಂಶಭೂತಂ ಕೇರಲೇಷು ವಿಪ್ರಂ ಜನಯಾಮಿ**" ಎಂದು ಹೇಳಿದೆ. ಹಾಗಿಲ್ಲವಾದರೆ, "ಅವತರಿಷ್ಯಾಮಿ" ಎಂದು ಹೇಳಬೇಕಾಗಿತ್ತು. ಪ್ರಾಯಃ ಎಲ್ಲಾ ದೈತ್ಯರೂ ಸಹ ಶಿವನ ಅನುಗ್ರಹದಿಂದ ಬಲವನ್ನು ಹೊಂದಿರುವುದು ಪುರಾಣ ಪ್ರಸಿದ್ಧವಾದ್ದರಿಂದ ಇದು ಅಸಂಭಾವಿತವಲ್ಲ. ಆದ್ದರಿಂದ ಶಂಕರರು ರುದ್ರನ ಅನುಗ್ರಹದಿಂದ ಹುಟ್ಟಿದ ದೈತ್ಯ ಎಂಬುದಾಗಿ ನಿಶ್ಚಯಿಸಬಹುದು, (ಪದ್ಮಪುರಾಣ)

ಶಂಕರಾಚಾರ್ಯರ ಚಾರಿತ್ರ್ಯದ ಬಗ್ಗೆ "ಮಣಿಮಂಜರಿ"ಕಾರರು ಅವನನ್ನು ವಿಧವಾಸುತ, ಜಾರಸ್ತ್ರಿಯಲ್ಲಿ ಹುಟ್ಟಿದವನು ಎಂಬುದಾಗಿ ಹೇಳಿದ್ದಾರೆ. ಇದರಲ್ಲಿ

ಹೊಸದೇನೂ ಇಲ್ಲ. ಇವೆಲ್ಲವೂ "ಶಂಕರ ವಿಜಯ"ದಲ್ಲೇ ಅಂಗೀಕೃತವಾಗಿದೆ (ಗತಭರ್ತೃಕಾ - 1-15) (ಶ್ಲೋಕಗಳಿಗೆ ಸಂಸ್ಕೃತ ಆವೃತ್ತಿಯನ್ನು ನೋಡಿರಿ).

ಆನಂದಗಿರೀಯ ಶಂಕರವಿಜಯ, ಮಾಧವೀಯ ಶಂಕರವಿಜಯ, ವಿದ್ಯಾರಣ್ಯ ಶಂಕರವಿಜಯ, Shankaracharya - His Life and Times ಎಂಬ ಹೆಸರಿನ ಶ್ರೀ ಸಿ. ಎನ್. ಕೃಷ್ಣಸ್ವಾಮಿ ಅಯ್ಯರ್‌ರವರ ಗ್ರಂಥದಲ್ಲೂ ವಿಧವಾಸುತ ಎಂದೇ ಹೇಳಲಾಗಿದೆ. ಕೆಲವೆಡೆ ಶಬ್ದತಃ ಜಾರಸುತ ಎಂದು ಹೇಳಿಲ್ಲವಾದರೂ ಅರ್ಥತಃ ಉಪಲಬ್ಧವಾಗುತ್ತದೆ. "ಮಣಿಮಂಜರಿ"ಕಾರರು ಶಬ್ದತಃ ಹೇಳಿದ್ದಾರೆ.

ಆದ್ದರಿಂದ "ಶ್ರೀ ಮಣಿಮಂಜರಿ", "ಶ್ರೀ ಸುಮಧ್ವವಿಜಯ" ಕರ್ತೃಗಳಾದ ಶ್ರೀ ಮನ್ನಾರಾಯಣ ಪಂಡಿತಾಚಾರ್ಯರಿಂದ ಶಂಕರರ ಜನ್ಮ ವಿಷಯದಲ್ಲಿ ಹೇಳಲ್ಪಟ್ಟಿರುವ ವಿಷಯ ಯಾವುದೂ ಕಲ್ಪಿತವಲ್ಲ. ಎಲ್ಲ ಅದ್ವೈತಪ್ರವರರಿಂದ, "ಶಂಕರವಿಜಯ"ಕಾರರಿಂದ ಹೇಳಲ್ಪಟ್ಟ ದೋಷಗಳನ್ನೇ ವಿಶದೀಕರಿಸಲಾಗಿದೆ. ಆದ್ದರಿಂದ ಸರ್ವರೀತಿಯಿಂದಲೂ ಅಶುದ್ಧ ಜನ್ಮ ಕಳಂಕಿತರಾದ ಶಂಕರರು ಶಂಕರಾವತಾರ ಎಂದು ಹೇಳುವುದು ಯುಕ್ತವಲ್ಲ.

ಅಂತ್ಯಕಾಲದಲ್ಲಿ ಶರೀರ ತ್ಯಾಗ ಕ್ರಮದಿಂದಲೂ ಸಾಮಾನ್ಯವಾಗಿ ಜೀವಿಯ ಉತ್ತಮತ್ವ ಅಥವಾ ಅಧಮತ್ವವನ್ನು ನಿಶ್ಚಯಿಸಬಹುದು. ಈ ವಿಷಯದಲ್ಲಿ "ಮಣಿಮಂಜರಿ"ಕಾರರು, ಶಂಕರಾಚಾರ್ಯರು ಭಗಂಧರ ರೋಗದಿಂದ ಪೀಡಿತವಾಗಿ ಪ್ರಾಣಬಿಟ್ಟರು ಎಂದು ಹೇಳಿದ್ದಾರೆ.

(ಅದ್ವೈತಿಗಳಿಂದ ಮಾನನೀಯರಾದ ವಿದ್ಯಾರಣ್ಯರೂ ಇದನ್ನೇ ಹೇಳಿದ್ದಾರೆ.) ಕೇವಲ 32ನೇ ವಯಸ್ಸಿನಲ್ಲಿ ಚಿಕಿತ್ಸೆ ಮಾಡಲಾಗದ ಘೋರ ಭಗಂಧರ ರೋಗ ನಿಮಿತ್ತವು, ಆ ರೋಗವಾದರೋ ಪಾಪಕರ್ಮಫಲ ಎಂದು ಹೇಳಿ ಶರೀರ ತ್ಯಾಗಕ್ಕೆ ಸಿದ್ಧರಾದ ಅದ್ವೈತಾಚಾರ್ಯರು ಮರಣವನ್ನು ಹೊಂದಿದರು ಎಂಬ ವಿಷಯ ಉಪೇಕ್ಷ ಮಾಡತಕ್ಕ ಸಾಮಾನ್ಯ ವಿಷಯವಲ್ಲ. ಸಾಕ್ಷಾತ್ ರುದ್ರಾವತಾರರಿಗೆ ಜಿಗುಪ್ಸಕರವಾದ ರಕ್ತಸ್ರಾವರೂಪ ನೀಚತರ ರೋಗ ಏಕೆ? ಜನ್ಮಾಂತರದಲ್ಲಿ ಮಾಡಿದ ಪಾಪಕರ್ಮ ಫಲ ಭೋಗ ಇಲ್ಲೇ ಏಕೆ? ಅದೃಷ್ಟವೇ ಕಾರಣವೆಂದರೆ ಏನು ಅದೃಷ್ಟ ಕಾರಣ? (ಸರಸ್ವತಿಯನ್ನೂ ಸಹ ಮಂತ್ರದಿಂದ ಕಟ್ಟಿಹಾಕಲು ಸಮರ್ಥರಾದವರಿಗೆ ಈ ಭಯಂಕರ ರೋಗವನ್ನು ನಿವಾರಿಸಿಕೊಳ್ಳಲು ಏಕೆ ಆಗಲಿಲ್ಲ ?) ಈ ರೀತಿಯ ಅಶಕ್ತರು ಮುರಪುರಹರನ

ಅವತಾರರೆಂದು ಅದ್ವೈತಿಗಳು ಹೇಗೆ ಮಾನ್ಯ ಮಾಡುತ್ತಾರೆ ? ಯಾರು, ತಾವೇ ಪಾಪರೋಗದಿಂದ ಸತ್ತರೋ ಅವರು ಹೇಗೆ ತಾನೇ ತನ್ನ ಅನುಯಾಯಿಗಳಾದ ಮಾಯಾವಾದಿಗಳನ್ನು ಮೃತ್ಯುಬಂಧನದಿಂದ ವಿಮೋಚನೆಗೊಳಿಸಿಯಾರು? ಅಥವಾ ಹೇಗೆ ತಾನೇ ಅವರ ಭಕ್ತರುಗಳು ಈ ರೀತಿ ವ್ಯಕ್ತಿಯ ಸಿದ್ಧಾಂತವನ್ನು ಅವಲಂಬಿಸಿ ತಾವೇ ಪರಮಾತ್ಮನೆಂದು ತಿಳಿದು ಮುಂದೊದಗುವ ದೇವದ್ರೋಹ ಪಾಪದ ಭೀತಿಯನ್ನು ಹೊಂದದೆ ನಿರ್ಭೀತರಾಗಿದ್ದಾರೆ ?

ಆದ್ದರಿಂದ ಮರಣದಿಂದಲೂ ಸಹ ಅದ್ವೈತಿಗಳಿಂದ ಅಂಗೀಕರಿಸಲ್ಪಟ್ಟ ರೀತಿಯಲ್ಲಿ ಶಂಕರರು ಮಹದೇವರಲ್ಲ. ಕಿಂತು ಪೂರ್ವದೇವರೇ ಎಂದು ನಿಶ್ಚಯಿಸಲು ಸಾಕು.

## ಮಂಡನ ಮಿಶ್ರನೊಡನೆ ವಾದ - ಪರಕಾಯ ಪ್ರವೇಶ ವಿಷಯ

ಇರಲಿ, ಜನನ ಮರಣ ವಿಷಯ ಒಂದೆಡೆಗೆ. ತಮ್ಮ ಜೀವಿತಾವಧಿಯಲ್ಲಿ ನಿರ್ದುಷ್ಟ ಜೀವನವನ್ನು ನಡೆಸುವುದು ಜ್ಞಾನಿಗಳಿಗೆ, ಬುದ್ಧಿವಂತರಿಗೆ, ವಿಶೇಷವಾಗಿ ಮತಸ್ಥಾಪಕರಿಗೆ ತತ್ರಾಪಿ ಷಣ್ಮತ ಸ್ಥಾಪಕರಿಗೆ ಅತ್ಯಂತ ಆವಶ್ಯಕ. ಇಲ್ಲದಿದ್ದರೆ, ಯಾವ ಸ್ವಾಸ್ಥಚಿತ್ತನೂ ಆ ಮತವನ್ನು ಅಂಗೀಕರಿಸುವುದಿಲ್ಲ. ಮಂಡನಮಿಶ್ರ ಅಥವಾ ವಿಶ್ವರೂಪಾಚಾರ್ಯರೊಂದಿಗೆ ವಾದದಲ್ಲಿ ಮಧ್ಯಸ್ಥಳಾಗಿ ಅವರ ಪತ್ನಿಯನ್ನು ನಿಯೋಜಿಸಿದ್ದು, ಅನ್ಯೋನ್ಯ ಶಿಷ್ಯತ್ವದ ಪಣವನ್ನು ಸ್ವೀಕರಿಸಿದ್ದು, ಪರಾಜಿತನಿಂದ ತನ್ನ ಆಶ್ರಮ ತ್ಯಾಗ ಪ್ರತಿಜ್ಞೆ ಈ ರೀತಿಯಾಗಿ ಬಹಳ ವಿವಾದ ವಿಷಯಗಳು ಶಂಕರರ ಚರಿತ್ರೆಯಲ್ಲಿದೆ. ಭಿಕ್ಷಾರ್ಥವಾಗಿ ಆಹ್ವಾನಿಸಲ್ಪಟ್ಟ ವಿಶ್ವರೂಪನಿಂದ ವಾದಭಿಕ್ಷೆಯನ್ನು ಯಾಚಿಸುವುದು, ಪ್ರವರ್ತಿತ ಜಲ್ಪಕಥೆಯಲ್ಲಿ ನಿಶ್ಚಯವಾಗಿ ಪತಿಪಕ್ಷಪಾತಿನಿಯಾದ ಅವರ ಹೆಂಡತಿಯನ್ನು ಮಧ್ಯಸ್ಥಳಾಗಿ ಅಂಗೀಕರಿಸುವುದು ಪೂರ್ವಪರಿಚಿತವಲ್ಲದೆ ವಿಶ್ವಾಸಾರ್ಹವಲ್ಲ, ಪ್ರಬಲ ಧರ್ಮಶಾಸ್ತ್ರ ವಿರೋಧವನ್ನು ಲೆಕ್ಕಿಸದೆ ಸನ್ಯಾಸ ಪರಿತ್ಯಾಗ ಶ್ವೇತವಸ್ತ್ರಧಾರಣ ಪಣ ಸ್ವೀಕಾರ ಯಾವ ಪುರುಷಾರ್ಥ ಸಾಧನಕ್ಕಾಗಿ ? (ಶಂ.ವಿ. 8-62)

ಮಂಡನಮಿಶ್ರನ ಸನ್ಯಾಸ ಸ್ವೀಕಾರ ಪಣ ದೋಷರಹಿತವಾದರೂ, ಅದ್ವೈತಭಾಷ್ಯಕಾರರ ಸನ್ಯಾಸ ತ್ಯಾಗ ಪ್ರತಿಜ್ಞೆಯೇ ಮಹಾದೋಷ. ಅವನ ಹೆಂಡತಿಯ ಮಧ್ಯಸ್ಥವು ಕೂಡ ಶಂಕರಾಚಾರ್ಯರಿಂದ ಸೂಚಿಸಲ್ಪಟ್ಟದ್ದು ಎಂಬುದು ಆಶ್ಚರ್ಯತಮ.

## ಉಭಯಭಾರತಿಯೊಡನೆ ವಾದ

ಯಾರು ಈ ಉಭಯಭಾರತಿ ? ದುರ್ವಾಸರ ಶಾಪದಿಂದ ಭೂಮಿಯಲ್ಲಿ ಅವತರಿಸಿದ ಸರಸ್ವತಿಯೇ ಈಕೆ ಎಂದು ಕೆಲವು "ಶಂಕರವಿಜಯ"ಗಳಲ್ಲಿ ನಿರೂಪಿತವಾಗಿದೆ. (ಇದು ಬಾಣಭಟ್ಟನ ಕಾದಂಬರಿಯನ್ನು ಅನುಸರಿಸುತ್ತಿದೆ.) ಇದು "ಗುರುರತ್ನಮಾಲಿಕಾ ವ್ಯಾಖ್ಯಾ" ಕೃತನಾದ ಆತ್ಮಬೋಧನಿಂದ ಖಂಡಿಸಲ್ಪಟ್ಟಿದೆ. (ಬ್ರಹ್ಮ ಸರಸ್ವತಿಯರಿಗೆ ಅವತಾರವಿಲ್ಲವೆಂದು ಪುರಾಣಗಳು ಹೇಳುತ್ತಿವೆ.)

ಒಂದು ವೇಳೆ ಶಾಪದ ಕಥೆಯು ಯೋಜಿತವಾದರೂ ಅದನ್ನು ತಿಳಿದು ಶಾಪದಿಂದ ಮೋಚನೆ ಮಾಡಲು ಬಂದ ಸರ್ವಜ್ಞಶಂಕರರು ಶಾಪದಿಂದ ಮುಕ್ತಳಾಗಿ ಆಕಾಶದಲ್ಲಿ ಹೋಗುತ್ತಿರುವ ಅವಳನ್ನು ಮಂತ್ರ ಪ್ರಭಾವದಿಂದ ಕಟ್ಟಿ ಹಾಕುವುದು ಎಷ್ಟು ವಿಹಿತ ? ಅವಳನ್ನು ವಾದಕ್ಕೆ ಆಹ್ವಾನಿಸಿ ಪರಕಾಯ ಪ್ರವೇಶದಂತಹ ಕಳಂಕಿತ ಕರ್ಮದಲ್ಲಿ ಭಾಗಿಯಾಗುವುದು ಎಷ್ಟು ಔಚಿತ್ಯ? ಮುಂದೆ ಸರ್ವಜ್ಞಪೀಠಾರೋಹಣ ಮಾಡಲಿರುವ ವ್ಯಕ್ತಿಗೆ ಪರಕಾಯ ಪ್ರವೇಶ ಕಾಲದ ಪಾಪಾದಿಗಳೆಂಬ ಆಶಂಕವನ್ನು ನಿವಾರಣೆ ಮಾಡದೇ ಇರುವ ಈ ಕಾರ್ಯ ಹೇಗೆ ಸಜ್ಜನರ ಹೃದಯವನ್ನು ಸಂತೋಷಪಡಿಸುತ್ತದೆ ?

ಭಾರತಿಯನ್ನು ವಶೀಕರಿಸಿಕೊಂಡಿದ್ದು ಅವಳ ಪ್ರತಿಷ್ಠಾಪನೆಯನ್ನು ಶೃಂಗಗಿರಿಯಲ್ಲಿ ಮಾಡುವುದಕ್ಕಾಗಿ ಎಂದು ಕೆಲವರು ಹೇಳುವುದುಂಟು. ಅವರು ಮತಮದಾಂಧರು ! (ಶಾಪಗ್ರಸ್ತಳ ಪ್ರತಿಷ್ಠಾಪನೆಯಿಂದ ಏನು ಪ್ರಯೋಜನ? )

ಸನ್ಯಾಸಿಗಳಿಗೆ ಪರಪುರುಷನೊಡನೆ ಭಾಷಣಾದಿಗಳೇ ಕಳಂಕ. ಅವರೊಂದಿಗೆ ವಾದ ತತ್ರಾಪಿ ಕಾಮ ಕಲೆಯಲ್ಲಿ ಎನ್ನುವುದು ಕಳಂಕತಮ. ಹಗಲೂ ರಾತ್ರಿ ವಾದ ನಡೆಯಿತು ಎನ್ನುವುದು ನಗೆಯನ್ನು ತರಿಸುತ್ತದೆ. "ಗುರುರತ್ನಮಾಲಿಕೆ " ಯಲ್ಲಿ ಹೇಳಿದ ವಿಷಯವನ್ನೇ ಮಣಿಮಂಜರಿಯಲ್ಲಿ ಹೇಳಲಾಗಿದೆ.

ಉಭಯಭಾರತಿಯೊಡನೆ ವಾದ ಪ್ರಸಂಗ ನಡೆಯಿತು ಎಂಬುದು ವಾದಗ್ರಸ್ತವಾಗಿದೆ ಎಂಬುದಾಗಿ ಅದ್ವೈತಿಗಳಲ್ಲಿ ಪ್ರಶ್ನೆ ಬಂದಿದೆ. (ಈ ವಿಷಯದಲ್ಲಿ ಶಂಕರವಿಜಯಗಳಲ್ಲಿ ಐಕಮತ್ಯವಿಲ್ಲ.) "ಈ ಕಲ್ಪಿತ ಕಥೆಯು ಪರಮತೀಯರಿಗೆ ಆಚಾರ್ಯರು, ನೀತಿಬಾಹ್ಯರೆಂದು ಪ್ರಕಟಿಸಿ ಅವಕಾಶ ಮಾಡಿಕೊಟ್ಟಿತೇ ಹೊರತು ಈ ಮಹನೀಯರ ಯೋಗ್ಯತೆಯ ಪ್ರದರ್ಶನಕ್ಕೆ ಎಳ್ಳಷ್ಟೂ ಸಹಾಯವಾಗಲಿಲ್ಲ" ಎಂದು ಅದ್ವೈತಿಗಳೇ ಬರೆದಿದ್ದಾರೆ.

ಶಂಕರರ ಸರ್ವಜ್ಞತ್ವದ ವಿಷಯದಲ್ಲೂ ಸಹ ಸಂಶಯ ಬರುತ್ತದೆ. ಸರ್ವಜ್ಞರಾಗಿದ್ದರೆ ಆರು ತಿಂಗಳ ಅವಧಿಯನ್ನು ಏಕೆ ಕೇಳಿದರು ? ಕಾಮಶಾಸ್ತ್ರದಲ್ಲಿ ಪರಿಣತರಲ್ಲದಿದ್ದರೆ ಕೇವಲ ಅಧ್ಯಯನದಿಂದ ತಿಳಿಯಬಹುದಿತ್ತು. ಏಕೆ ಕಾಮಭೋಗದಲ್ಲಿ ರತರಾದರು ? ಈ ಪ್ರಕರಣವು ಸಭ್ಯರ ಮನಸ್ಸಿನಲ್ಲಿ ಅವಶ್ಯವಾಗಿ ಶಂಕರರ ವಿಷಯದಲ್ಲಿ , "ಶಂಕರ ವಿಜಯ"ದಲ್ಲಿ ಜಿಗುಪ್ಸೆಯನ್ನು ಉಂಟು ಮಾಡುತ್ತದೆ. (ಅದ್ವೈತಿಗಳಿಗೂ ಇದು ಗೌರವವಲ್ಲ. ಏತಾದೃಶ ವ್ಯಕ್ತಿ ಹೇಗೆ ದೇವತಾವತಾರರಾಗಲು ಸಾಧ್ಯ. ಅದರಲ್ಲೂ ರುದ್ರಾವತಾರರಾಗಲು ಸಾಧ್ಯವೇ? ಜ್ಞಾನಿಗಳೇ ಹೇಳಬೇಕು. )

ಕೊನೆಯದಾಗಿ "ಮಾಣಿಕ್ಯಮಂಜರಿ"ಕಾರರನ್ನು ಕುರಿತು ಹೀಗೆ ಹೇಳುತ್ತೇವೆ - ಒಂದು ವೇಳೆ ಅವರು ತಮ್ಮ ಗುರುಗಳನ್ನು ಶುದ್ಧರು ಎಂದು ಭಾವಿಸಿದರೆ, ಅವರನ್ನು ರೋಗ ರಹಿತರನ್ನಾಗಿ ಹೇಳಬೇಕು. ಆದರೆ ಅದು ಸತ್ಯವಲ್ಲ. (ಪ್ರಾಚೀನ ಅದ್ವೈತ ಪ್ರಮುಖರು ತಮ್ಮ ತಮ್ಮ "ಶಂಕರವಿಜಯ"ಗಳಲ್ಲಿ ಸ್ಪಷ್ಟವಾಗಿ ಹೇಳಿರುವ ದೋಷಗಳನ್ನು "ಮಣಿಮಂಜರಿ"ಕಾರರು ವಿಶದೀಕರಿಸಿದ್ದಾರೆ. ಆದ್ದರಿಂದ ಖಂಡನೆಯನ್ನು ಮಾಡುವುದಾದರೆ ಮೊದಲು ನಿಮ್ಮಿಂದ ರಚಿತವಾದ ಶಂಕರವಿಜಯಗಳ ಖಂಡನೆಯನ್ನು ಮಾಡಬೇಕು.) ದೇವತ್ವಪರವಾದ ಪುರಾಣವಚನಗಳಿಗೆ ಅನ್ಯಾರ್ಥವನ್ನು ಮಾಡಬೇಕು. ಆದ್ದರಿಂದ "ಮಣಿಮಂಜರಿ" ಗ್ರಂಥದಲ್ಲಿ ಹೇಳಿರುವ ಶಂಕರರ ದುಷ್ಟತ್ವ ಸಾಧುವೇ ಎಂಬುದಾಗಿ ಹೇಳುತ್ತಾ ಇಂತಹ ಅಪಹಾಸನೀಯ ಚರಿತ್ರೆಯ ವಿಮರ್ಶೆಯು ಇಷ್ಟು ಸಾಕು.

## ಗೋಮಂಜರಿ

ಪ್ರಕೃತ "ಗೋಮಂಜರಿ" ಗ್ರಂಥವು, "ಮಣಿಮಂಜರಿ" ಗ್ರಂಥದ ಮಂಡನೆಯನ್ನು ದುಷ್ಕೃತ"ಮಾಣಿಕ್ಯಮಂಜರಿ" ಖಂಡನಪೂರ್ವಕ ಮಾಡುತ್ತಿದೆ. ಶ್ರೀ ವಾಯುದೇವರ ಅವತಾರರಾದ ಶ್ರೀ ಮಧ್ವಾಚಾರ್ಯರ ವೇದಪ್ರತಿಪಾದ್ಯತ್ವವನ್ನು ಸಮರ್ಥಿಸುತ್ತಿದೆ. "ತತ್ವಮಸ್ಯಾದಿ" ವಾಕ್ಯಗಳನ್ನು ಪರ್ಯಾಲೋಚಿಸಿದೆ. ಶ್ರೀ ವಿಷ್ಣುವಿನ ಸರ್ವೋತ್ತಮತ್ವವನ್ನು ಹಾಗೂ ಶಿವನ ವಿಷ್ಣುಭಕ್ತತ್ವ ಹಾಗೂ ಅವರತ್ವವನ್ನು ಉಪಪಾದಿಸಿದೆ. ಶ್ರೀ ಮಧ್ವಾಂತರ್ಯಾಮಿಯಾದ ಶ್ರೀ ರಮಾರಮಣನ ಸರ್ವಜ್ಞತ್ವ, ಸ್ವತಂತ್ರತ್ವ ಹಾಗೂ ಜಗದ್ವಿಲಕ್ಷಣತ್ವದ ಹಿರಿಮೆಯನ್ನು ಸಾರುತ್ತಿದೆ ಹಾಗೂ ಶ್ರೀಹರಿವಾಯುಗಳಿಗೆ ಪ್ರೀತಿಕರವಾಗಿದೆ.

ಈ ಗ್ರಂಥಕರ್ತಾರರಾದ ಶ್ರೀ ದ್ವಾರಕಾನಾಥಾಚಾರ್ಯರು ಪರಮಪೂಜ್ಯ, ಪಂಡಿತರಾಜ ಶ್ರೀ ಜಾಲಿಹಾಳ ಶ್ರೀನಿವಾಸಾಚಾರ್ಯರ ಪಾದಸೇವಾ ಭಾಗ್ಯವನ್ನು ಹೊಂದಿ, ಶ್ರೀಮನ್ನ್ಯಾಯಸುಧಾಂತ ಅಧ್ಯಯನ ಮಾಡಿದ್ದಾರೆ. ಕಠಿಣ ಪರಿಶ್ರಮಿಗಳೂ, ಸದಾಚಾರನಿರತರೂ, ಶುದ್ಧವರ್ಣಾಶ್ರಮ ಧರ್ಮ ಸಂಪನ್ನರೂ ಆದ ಇವರು ಕಲ್ಯಾಣ ನಗರಿಯಲ್ಲಿವಾಸಿಸುತ್ತಿದ್ದಾರೆ. ಶ್ರೀ ಹನುಮಂತರಾವ್ ಹಾಗೂ ಶ್ರೀಮತಿ ಶಾಂತಬಾಯಿ ದಂಪತಿಗಳ ಜ್ಯೇಷ್ಠ ಸುಪುತ್ರರಾದ ಶ್ರೀ ದ್ವಾರಕಾನಾಥಾಚಾರ್ಯರು ಇದೇ ರೀತಿ ಶ್ರೀ ಹರಿವಾಯುಗಳ ಸೇವಾ ರೂಪವಾದ ಅನೇಕ ಕೃತಿರತ್ನಗಳನ್ನು ರಚಿಸಲೆಂದು ಆಶಿಸುತ್ತಾ, ನಮ್ಮ ಪೂಜ್ಯ ಗುರುವರ್ಯರನ್ನೂ ಹಾಗೂ ವಿದ್ವಜ್ಜನರನ್ನೂ ವಂದಿಸುತ್ತಾ ವಿರಮಿಸುತ್ತೇನೆ.

"ಗೋಮಂಜರಿ" ಗ್ರಂಥದ ಭೂಮಿಕೆಯ ಸಂಕ್ಷಿಪ್ತ ಕನ್ನಡ ಸಾರಾಂಶವು ಮುಕ್ತಾಯವಾಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು ॥



|| ಶ್ರೀ ||

ಶ್ರೀ ಗುರುಭ್ಯೋ ನಮಃ

# ಗೋಮಂಜರಿ

ಹಯಗ್ರೀವಂ ಸದಾ ವಂದೇ ಜ್ಞಾನಾನಂದಾತ್ಮ ವಿಗ್ರಹಮ್ ।
ಮುಮುಕ್ಷುಭಿಃ ಸದಾ ಧ್ಯೇಯಂ ಸರ್ವಾಭೀಷ್ಟಫಲಪ್ರದಂ ॥
ಅವತಾರ ತ್ರಯೋಪೇತಂ ಮುಖ್ಯಪ್ರಾಣಂ ಹರಿಪ್ರಿಯಂ ॥
ಅಜ್ಞಾನಾದಿ ದೋಷಹೀನಂ ನಮಾಮಿ ತ್ರಿಜಗದ್ಗುರುಂ ॥
ಬೃಹಸ್ಪತಿಸಮಃ ಶಾಸ್ತ್ರೇ ಗಾಯನೇ ನಾರದೋಪಮಃ ।
ಭಕ್ತೌ ಪ್ರಹ್ಲಾದ ಸದೃಶಃ ಶ್ರೀನಿವಾಸೋ ಗುರುರ್ಮಮ ॥

ಸರ್ವೋತ್ತಮನಾದ ಭಗವಂತನ ಯಥಾರ್ಥ ಜ್ಞಾನವೇ ಮುಕ್ತಿಯ ಮಾರ್ಗವು ಬೇರಾವುದು ಅಲ್ಲವೆಂಬ ವಿಷಯವು ಸಮಸ್ತ ವಿದ್ವಜ್ಜನರಿಗೆ ಸುವಿದಿತವಾಗಿದೆ. ಅಂತಹ ಯಥಾರ್ಥಜ್ಞಾನವಾದರೋ ಶಮದಮಾದಿ ಸಂಪತ್ತುಳ್ಳ ಅಧಿಕಾರಿ ಯೋಗ್ಯ ಜನರಿಗೆ ಮಾತ್ರ ಲಭಿಸತಕ್ಕದೆಂದು ಸಹ ತಿಳಿದ ವಿಷಯವಾಗಿದೆ. ಅಧಿಕಾರಿಗಳು ಯಥಾರ್ಥ ಜ್ಞಾನಕ್ಕಾಗಿ ದುರ್ಮತ ಪರಿತ್ಯಾಗ ಪೂರ್ವಕ ಸನ್ಮತ ಗ್ರಹಣವನ್ನು ಅಪೇಕ್ಷಿಸುತ್ತಾರೆ. ಇಂತಹ ಅಧಿಕಾರಿಗಳಿಗೋಸ್ಕರವೇ ಶ್ರೀ ಮದಾಚಾರ್ಯರು ಅವತಾರ ಮಾಡಿ ಪರಮತ ನಿರಾಕರಣ ಪೂರ್ವಕ ಸ್ವಮತಸ್ಥಾಪನೆಯನ್ನು ಪ್ರಮಾಣ ಪೂರ್ವಕವಾಗಿ ಮಾಡಿದ್ದಾರೆ.

ವಿಭಿನ್ನ, ವಿರುದ್ಧ ರೀತಿಯಲ್ಲಿ ಪ್ರತಿಪಾದಿಸಿರುವ ಬೇರೆ ಬೇರೆ ಮತಗಳನ್ನು ಅವಲೋಕನ ಮಾಡಿದಾಗ, ಅವುಗಳಲ್ಲಿ ಯಾವುದಾದರೊಂದು ಮತವು ನಿರ್ದುಷ್ಟವಾದದ್ದೆಂದು ಉಳಿದವುಗಳು ದುಷ್ಟವೆಂದು ತಿಳಿದುಬರುತ್ತದೆ. ವಸ್ತುಸ್ಥಿತಿ ಹೀಗಿರುವಾಗ ಆಯಾಯಾ ಮತಾಚಾರ್ಯರು ಹಾಗೂ ಅವರ ಅನುಯಾಯಿಗಳು ತಮ್ಮ ತಮ್ಮ ಸಿದ್ಧಾಂತವೇ ಶುದ್ಧವೆಂದು ಹಾಗೂ ಪರಾಚಾರ್ಯರ ಮತ ದುಷ್ಟವೆಂದು ಪ್ರತಿಪಾದಿಸಲು ಕಾಲಕಾಲಕ್ಕೆ ಖಂಡನ ಮಂಡನ ಗ್ರಂಥಗಳನ್ನು ರಚಿಸುತ್ತಾ ಬಂದಿರುತ್ತಾರೆ.

ಇದೇ ರೀತಿ, ಬಹುಶಃ ಶ್ರೀ ಮದಾನಂದತೀರ್ಥರ ಸಮಕಾಲೀನರಾದ ಲಿಕುಚಕುಲತಿಲಕರಾದ ಶ್ರೀ ನಾರಾಯಣ ಪಂಡಿತಾಚಾರ್ಯರು "ಮಣಿಮಂಜರಿ"

ಎಂಬ ಗ್ರಂಥವನ್ನು ರಚನೆ ಮಾಡಿ, ಅದರಲ್ಲಿ ಶ್ರೀಮದಾಚಾರ್ಯರ ಅವತಾರದ ಪೂರ್ವ ಕಾಲದ ಇತಿಹಾಸವನ್ನು ವರ್ಣಿಸಿದ್ದಾರೆ. ಇದು ಸಕಲ ಮಾಧ್ವರಿಗೆ ವೇದ್ಯವಾದ ವಿಷಯವಾಗಿದೆ.

ಇತ್ತೀಚೆಗೆ ರಘುನಾಥಸೂರಿ ಎಂಬುವರಿಂದ ರಚಿತವಾದ "ಮಾಣಿಕ್ಯ ಮಂಜರಿ" ಎಂಬ ವ್ಯಾಖ್ಯಾನ ಸಹಿತವಾದ ಗ್ರಂಥವು ಉಪಲಬ್ಧವಾಗಿದೆ. ಆ ಗ್ರಂಥವು "ಮಣಿಮಂಜರಿ"ಯ ಖಂಡನಾಭಾಸ ರೂಪವಾಗಿದೆ. ಆ "ಮಾಣಿಕ್ಯಮಂಜರಿ" ಎಂಬ ಗ್ರಂಥದ ವಿಮರ್ಶೆಯು ಯಥಾಮತಿ ನಮ್ಮ ಗುರುವರ್ಯರ ಅನುಗ್ರಹದಿಂದ ಮಾಡಲ್ಪಡುತ್ತದೆ.

"ಮಾಣಿಕ್ಯಮಂಜರಿ" ಗ್ರಂಥದಲ್ಲಿ 4 ಅಧ್ಯಾಯಗಳಿದ್ದು, ಮೊದಲನೇ ಅಧ್ಯಾಯದಲ್ಲಿ ಹರಿಸರ್ವೋತ್ತಮ ನಿರಾಕರಣ ಪೂರ್ವಕ ಶಿವಸರ್ವೋತ್ತಮತ್ವವನ್ನು ಪ್ರತಿಪಾದಿಸಲಾಗಿದೆ. ಮೊದಲು ಆ ವಿಷಯವನ್ನು ವಿಮರ್ಶೆ ಮಾಡೋಣ.

## ರುದ್ರದೇವರ ಸರ್ವೋತ್ತಮತ್ವ ನಿರಾಕರಣೆ

### ಗಂಗಾವತರಣ ವಿಷಯ

ಅನೇಕ ಮೂಲ ಪ್ರಮಾಣಗಳ ಅವಲೋಕನದಿಂದ ಶ್ರೀ ಹರಿಯ ಸರ್ವೋತ್ತಮತ್ವವು ತಿಳಿದು ಬರುತ್ತದೆ. ರುದ್ರದೇವರು ಸರ್ವೋತ್ತಮರಲ್ಲವೆಂದು ಅನೇಕ ಕಾರಣಗಳನ್ನು ಕೊಟ್ಟು ಆ ಗ್ರಂಥಗಳಲ್ಲಿ ಉಪಪಾದಿಸಲಾಗಿದೆ. "ಓಂ ಪತ್ಯುರಸಾಮಂಜಸ್ಯಾತ್ ಓಂ" ಎಂಬ ಬ್ರಹ್ಮಸೂತ್ರವು ರುದ್ರದೇವರ ದೋಷಗಳನ್ನು ಹೇಳುತ್ತಿದೆಯೇ ಹೊರತು ಸರ್ವೋತ್ತಮತ್ವವನಲ್ಲ. ಅಂತಹ ಅನೇಕ ಶಿವ ಸರ್ವೋತ್ತಮತ್ವ ಬಾಧಕಗಳಲ್ಲಿ ಗಂಗಾಧರತ್ವವು ಒಂದು.

"ಮಾಣಿಕ್ಯಮಂಜರಿ"ಕಾರರ ಮೊದಲನೆ ರೀತಿಯ ರುದ್ರ ಸರ್ವೋತ್ತಮತ್ವ ಸ್ಥಾಪನೆಯು ಹರಿಪಾದೋದಕ ಗಂಗಾಧರತ್ವ ನಿರಾಕರಣ ಪೂರ್ವಕವಾಗಿದೆ. ಅವರ ಅಭಿಪ್ರಾಯದಂತೆ,

"ಗಂಗಾಧರತ್ವವು ರುದ್ರದೇವರ ನ್ಯೂನತೆಯನ್ನು ಹೇಳಲು ಸಮರ್ಥವಾಗಿಲ್ಲ. ಏಕೆಂದರೆ ಭ್ರಾಂತರು ಮಾತ್ರ ರುದ್ರದೇವರು ಹರಿಪಾದೋದಕವನ್ನು ಧಾರಣೆ ಮಾಡಿರುವರೆಂದು ಹೇಳುತ್ತಾರೆ. ವಸ್ತುತಸ್ತು ರುದ್ರದೇವರು ಧಾರಣೆ ಮಾಡಿರುವುದು ಹೈಮವತಿ

ಗಂಗೆಯನ್ನೇ ಹೊರತು ವಿಷ್ಣುಪದಿ ಗಂಗೆಯನಲ್ಲ. ಆದ್ದರಿಂದ ಈ ಕಾರಣದಿಂದ ರುದ್ರದೇವರಿಗೆ ವಿಷ್ಣುವಿನಿಗಿಂತ ನ್ಯೂನತೆಯನ್ನು ಹೇಳಬಾರದು" ಎಂದರೇ, ಈ ವಾದ ಸರಿಯಲ್ಲ. ಭಾಗವತ ಪಂಚಮಸ್ಕಂಧ ಹದಿನೇಳನೇ ಅಧ್ಯಾಯದಲ್ಲಿ ಗಂಗಾವತರಣ ನಿರೂಪಣಾ ಸಂದರ್ಭದಲ್ಲಿ,

ತತ್ರ ಭಗವತಃ ಸಾಕ್ಷಾತ್ ಯಜ್ಞಲಿಂಗಸ್ಯ ವಿಷ್ಣೋಃ...

ಎಂಬುದಾಗಿ ತ್ರಿವಿಕ್ರಮರೂಪಿ ವಿಷ್ಣುವಿನ ಎಡಗಾಲಿನ ಹೆಬ್ಬೆರಳಿನ ಉಗುರಿನ ತುದಿಯಿಂದ ಬ್ರಹ್ಮಾಂಡ ಕಟಾಹ ಒಡೆದಾಗ ಬಾಹ್ಯಜಲ ಬ್ರಹ್ಮಾಂಡದ ಒಳಗೆ ಹರಿಯಲಾರಂಭಿಸಿತು. ಅದನ್ನು ಬ್ರಹ್ಮದೇವರು ತಮ್ಮ ಕಮಂಡಲುವಿನಲ್ಲಿ ಶೇಖರಿಸಿ ತ್ರಿವಿಕ್ರಮರೂಪಿ ಭಗವಂತನ ಪಾದ ತೊಳೆದರು. ಆ ನೀರೇ ವಿಷ್ಣುಪದಿ ಎಂದು ಪ್ರಸಿದ್ಧಿಯಾಯಿತು. ಅದನ್ನೇ ರುದ್ರದೇವರು ತಮ್ಮ ಶಿರಸ್ಸಿನಲ್ಲಿ ಧಾರಣೆ ಮಾಡಿದರು. ಆದ್ದರಿಂದ ಅವರು "ಶಿವ"ರಾದರು ಎಂದು ಸ್ಪಷ್ಟವಾಗಿ ಹೇಳಿದೆ. (ಈ ಭಾಗಕ್ಕೆ ಶ್ರೀಧರಸ್ವಾಮಿ ಎಂಬ ಅದ್ವೈತ ಪಂಡಿತನೂ ಕೂಡ ಹೀಗೆಯೇ ವ್ಯಾಖ್ಯಾನ ಮಾಡಿದ್ದಾನೆ.)

ನವಮ ಸ್ಕಂಧದಲ್ಲಿ ಸ್ಪಷ್ಟವಾಗಿ,

**"ಶಿವೋ ದಧಾರಾವಹಿತೋ ಗಂಗಾಂ ಪಾದಪೂತಜಲಂ ಹರೇಃ"** ಎಂದು ಹೇಳಿದೆ.

(ಈ ಭಾಗದ ವ್ಯಾಖ್ಯಾನದಲ್ಲೂ ಶ್ರೀಧರಸ್ವಾಮಿಯು ಗಂಗೆಯು ವಿಷ್ಣು ಪಾದೋದಕವೆಂದು, ಅದನ್ನೇ ರುದ್ರದೇವರು ಧರಿಸಿದ್ದಾರೆಂದು ಹೇಳಿದ್ದಾನೆ.)

ವರಾಹ ಪುರಾಣ, ಬ್ರಹ್ಮವೈವರ್ತ, ರಾಮಾಯಣ, ವಿಷ್ಣು ಪುರಾಣ, ಮಾರ್ಕಂಡೇಯ ಪುರಾಣ, ಮೊದಲಾದವುಗಳಲ್ಲಿ ಗಂಗಾವತರಣ ಸಂದರ್ಭದಲ್ಲಿ ಅದರ ವಿಷ್ಣು ಪದಿತ್ವವನ್ನು ನಿರೂಪಿಸಲಾಗಿದೆ.

ಶಂಕರಾಚಾರ್ಯರು ತಮ್ಮ ಗಂಗಾಸ್ತೋತ್ರದಲ್ಲಿ,

"ಶಂಕರಮೌಳಿ ವಿಹಾರಿಣಿ ವಿಮಲೇ ಮಮ ಮತಿರಸ್ತಾಂ
ತವಪದ ಕಮಲೇ
ಹರಿಪದಪಾದ್ಯತರಂಗಿಣಿ ಗಂಗೆ...." ಎಂಬುದಾಗಿ ಸ್ತೋತ್ರ ಮಾಡಿದ್ದಾರೆ.

ವಸ್ತುಸ್ಥಿತಿ ಹೀಗಿರುವಾಗ ರುದ್ರದೇವರು ಧರಿಸಿರುವುದು ವಿಷ್ಣು ಪಾದೋದಕ ಗಂಗೆಯಲ್ಲ, ಹೈಮವತಿ ಗಂಗೆ ಎಂಬ "ಮಾಣಿಕ್ಯ ಮಂಜರಿ"ಕಾರರ ಅಭಿಪ್ರಾಯ ಬಹು ಪ್ರಮಾಣ ವಿರುದ್ಧವಾಗಿದ್ದು ಸ್ವತಃ ಅವರ ಗುರುಗಳ ಮಾತಿಗೆ ವಿರುದ್ಧವಾಗಿದೆ. ಆದ್ದರಿಂದ ಅಪಸಿದ್ಧಾಂತ ದೋಷದೂಷಿತವಾದ ಈ ವಿಚಾರವನ್ನು ಜ್ಞಾನಿಗಳು ಸರ್ವದಾ ಅಂಗೀಕರಿಸತಕ್ಕದ್ದಲ್ಲ. (ಪ್ರಮಾಣ ವಚನಗಳಿಗೆ ಸಂಸ್ಕೃತ ಆವೃತ್ತಿಯನ್ನು ನೋಡಿರಿ)

## ರುದ್ರದೇವರ ಸ್ಮಶಾನವಾಸಿತ್ವ ವಿಚಾರ

ರುದ್ರದೇವರ ಸ್ಮಶಾನವಾಸಿತ್ವವು ಒಂದು ದೋಷ. ಸ್ಮಶಾನವಾಸಿತ್ವ ಅಮಂಗಳ ರೂಪವಾಗಿರುವುದರಿಂದ ಶ್ರೇಯಃಪ್ರದವಲ್ಲ. ಆದ್ದರಿಂದ ರುದ್ರದೇವರ ಸ್ಮಶಾನ ವಾಸಿತ್ವ ವಿಚಾರವನ್ನು ಮಾಡುವುದು ಅತ್ಯಂತ ಸೂಕ್ತ.

"ಮಾಣಿಕ್ಯ ಮಂಜರಿ"ಯಲ್ಲಿ ರುದ್ರದೇವರು ಸ್ಮಶಾನವಾಸಿಗಳಾಗಿರುವುದರಿಂದ ಅವರು ಅಮಂಗಳರು, ಅವರಿಗೆ ಶ್ರೇಯಪ್ರದ ಇಲ್ಲವೆಂದು ಹೇಳಬಾರದು. ಏಕೆಂದರೆ ಮಹಾಪ್ರಲಯವೂ ಕೂಡ ಸ್ಮಶಾನವೇ, ಸ್ಮಶಾನವು ಅಪವಿತ್ರವೆಂದು ಹೇಳಿದರೆ ರುದ್ರದೇವರ ನಿತ್ಯತ್ವ ಹಾಗೂ ಶ್ರೇಯಪ್ರದತ್ವಕ್ಕೆ ಅಪಾಯ ಬರುತ್ತದೆ. ಯದ್ಯಪಿ ಭದ್ರಕಾಳಿಭೈರವಗಣಗಳಿಂದ ಕೂಡಿ ಸಂಧ್ಯಾಕಾಲದಲ್ಲಿ ಜಗತ್ತನ್ನು ರಕ್ಷಣೆ ಮಾಡುವುದಕ್ಕಾಗಿ ಆನಂದದಿಂದ ತಮ್ಮ ವಾಸಸ್ಥಾನವಾದ ಸ್ಮಶಾನದಲ್ಲಿ ರುದ್ರದೇವರು ಮಾಡುವ ನೃತ್ಯವು ಅವರ ಪರಮದಯಾಲುತ್ವವನ್ನು ತಿಳಿಸುತ್ತದೆ. ಮಹಾಭಾರತದ ಅನುಶಾಸನ ಪರ್ವದಲ್ಲೂ ಸಹ "ಸ್ಮಶಾನವಾದರೂ ಸಹ ನನ್ನ ವಾಸಸ್ಥಾನಕ್ಕಿಂತ ಪವಿತ್ರ ಸ್ಥಳ ಬೇರೆ ಯಾವುದೂ ಇಲ್ಲ. ಮುನಿಗಳಿಂದ ಪವಿತ್ರಸ್ಥಳವೆಂದು ಹೇಳಲ್ಪಟ್ಟ ಸ್ಮಶಾನದಲ್ಲಿ ನಾನು ವಾಸ ಮಾಡುತ್ತೇನೆ " ಎಂದಿದೆ. ಆದ್ದರಿಂದ ಸ್ಮಶಾನವಾಸಿಗಳಾದರೂ ಸಹ ರುದ್ರದೇವರ ಶ್ರೇಯಪ್ರದತ್ವ ಹಾಗೂ ಪವಿತ್ರತೆಯು ಸಿದ್ಧವಾಗಿದೆ ಎಂದು ಹೇಳಲಾಗಿದೆ. ಈ ವಾದ ಸರಿಯಲ್ಲ.

ಏಕೆಂದರೆ ಸ್ಮಶಾನ ಶಬ್ದದ ನಿಷ್ಪತ್ತಿಯನ್ನು ಶಬ್ದಾರ್ಥ ಕೋವಿದರಾದ ಜ್ಞಾನಿಗಳು ಹೀಗೆ ವರ್ಣಿಸಿದ್ದಾರೆ :

ಶ್ಮ ಎಂದರೆ ಶವ ಅಥವಾ ಹೆಣ, ಶಾನ ಎಂದರೆ ಶಯನ. ಆದ್ದರಿಂದ ಸ್ಮಶಾನ ಎಂದರೆ ಶವವನ್ನು ಮಲಗಿಸುವ ಸ್ಥಳ ಎಂದು ಅರ್ಥ. ಶವವು ಅಪವಿತ್ರವಾದ ಮೇಲೆ ಶವವನ್ನು

ಮಲಗಿಸುವ ಸ್ಮಶಾನ ಅಪವಿತ್ರವಲ್ಲವೇ? ಸ್ಮಶಾನಕ್ಕೆ ಹೋದ ಜನರು ಶುದ್ಧ್ಯರ್ಥವಾಗಿ ಸ್ನಾನಾದಿಗಳನ್ನು ಮಾಡುವುದು ಜಗತ್ತಿನಲ್ಲಿ ಕಂಡಿದೆ. ವರಾಹ ಪುರಾಣದಲ್ಲಿ ವರಾಹದೇವರು ತಮ್ಮ ಪತ್ನಿಯಾದ ಧರಣಿದೇವಿ (ಭೂದೇವಿ)ಗೆ ಸ್ಮಶಾನದ ಅಪವಿತ್ರತೆ, ಅಲ್ಲಿಗೆ ಹೋಗಿ ಸ್ನಾನ ಮಾಡದೇ ಇರುವವರಿಗೆ ಆಗುವ ಅಶುಭಫಲಗಳು ರುದ್ರದೇವರ ಸ್ಮಶಾನವಾಸಕ್ಕೆ ಕಾರಣ, ಅವರು ತಮ್ಮ ಪಾಪವನ್ನು ಕಳೆದುಕೊಳ್ಳಲು ಮಾಡಿಕೊಂಡ ಪ್ರಾಯಶ್ಚಿತ್ತಗಳನ್ನು ವಿವರವಾಗಿ ವರ್ಣಿಸಿದ್ದಾರೆ. (ಸಂಸ್ಕೃತ ಆವೃತ್ತಿ ನೋಡಿ)

ಅದೂ ಅಲ್ಲದೇ "ಮಾಣಿಕ್ಯ ಮಂಜರಿ" ಗ್ರಂಥಕಾರರೇ ತಮ್ಮ ಗ್ರಂಥದಲ್ಲಿ ಚಕ್ರಾಂಕನ ಖಂಡನ ಭಾಗದಲ್ಲಿ ""ಹೇಗೆ ಸ್ಮಶಾನದಲ್ಲಿರುವ ಕಟ್ಟಿಗೆ ಯಾವ ಕೆಲಸಗಳಿಗೂ ಬರುವುದಿಲ್ಲವೋ ಹಾಗೇ ಚಕ್ರಾಂಕಿತನಾದ ಬ್ರಾಹ್ಮಣ ಸರ್ವಕರ್ಮ ಬಹಿಷ್ಕೃತನಾಗುತ್ತಾನೆ" ಎಂದು ಹೇಳಿದ್ದಾರೆ. ಇದರಿಂದ ಸ್ಮಶಾನದಲ್ಲಿರುವ ಕಟ್ಟಿಗೆಯೂ ಸಹ ಅಪವಿತ್ರವೆಂದು ಗೊತ್ತಾಗುತ್ತದೆ. ಈಗ ಸ್ಮಶಾನವನ್ನು ಪವಿತ್ರವೆಂದರೆ ಪರಸ್ಪರ ವಿರೋಧ ಪ್ರಸಂಗ ಬರುತ್ತದೆ.

ಸ್ಮಶಾನದ ಅಪವಿತ್ರತೆಯು ಚಾಣಕ್ಯವಾಕ್ಯದಿಂದಲೂ, ಭಾಗವತ, ಸ್ಕಾಂಧ ಪುರಾಣಗಳ ದಕ್ಷಪ್ರಜಾಪತಿ ಯಜ್ಞ ಭಾಗದಲ್ಲಿ ಬರುವ ವಾಕ್ಯಗಳಿಂದ ತಿಳಿದು ಬರುತ್ತದೆ.

ಇಲ್ಲಿ ನಾವು ಒಂದು ಅಂಶವನ್ನು ನೆನಪಿನಲ್ಲಿಡಬೇಕು.

ರುದ್ರದೇವರು ಅಪವಿತ್ರವಾದ ಸ್ಮಶಾನವಾಸಿಗಳಾಗಿರುವುದರಿಂದ **ಸರ್ವೋತ್ತಮರಾಗಿರಲು ಸಾಧ್ಯವಿಲ್ಲವೆಂದು ಮಾತ್ರ ನಮ್ಮ ಅಭಿಮತ.** ರುದ್ರದೇವರು ಸ್ಮಶಾನ ವಾಸಿಗಳಾಗಿದ್ದರೂ ಅವರು ಪೂಜ್ಯರೇ. ಹರಿಭಕ್ತ ಪ್ರಮುಖರೂ, ಪರಮವೈಷ್ಣವರೂ ಆದ ಮಹಾರುದ್ರದೇವರಲ್ಲಿ ಮಾಡಿದ ಕಿಂಚಿತ್ ದೋಷವೂ ಸಹ ಮಹಾಪರಾಧವಾಗುತ್ತದೆ.

ಇನ್ನು ಮಹಾಪ್ರಲಯ ಕಾಲದಲ್ಲಿ ಸರ್ವಪದಾರ್ಥಗಳ ನಾಶವಾದರೂ ಸಹ ಅದನ್ನು ಶವದಹನ ಸ್ಥಳವಿಶೇಷವಾದ ಸ್ಮಶಾನ ಎಂದು ಹೇಳುವುದು ಶಾಸ್ತ್ರದಲ್ಲಿ ಹಾಗೂ ಲೋಕದಲ್ಲಿ ಎಲ್ಲೂ ಕಂಡುಬಂದಿಲ್ಲ. ವಸ್ತುತಸ್ತು ಪ್ರಲಯವೆಂದರೆ ತತ್ವಗಳ ಪರಸ್ಪರ ಪ್ರವೇಶ ಮಾತ್ರ. ಅದಕ್ಕೆ ಅದನ್ನು "ಲಯ" ಎಂದು ಕರೆದಿದ್ದಾರೇ ಹೊರತು ಶವ ದಾಹಕ ಸ್ಥಳವೆಂದು ಕರೆದಿಲ್ಲ.

ಆದ್ದರಿಂದ ಪ್ರಲಯವೂ ಒಂದು ಸ್ಮಶಾನ ಎಂದು ತಿಳಿಯಬಾರದು. ಕೆಲವು ಕಡೆ ಪ್ರಲಯದ ಸ್ಮಶಾನತ್ವವು ಕಂಡುಬಂದಿದ್ದರೆ ಅದು ಕೇವಲ ಔಪಚಾರಿಕ ಮಾತ್ರ. ಹಾಗಿಲ್ಲವಾದರೆ ಯಾವ ದೇಶವೂ ಅಸ್ಮಶಾನವಲ್ಲವಾಗಿ, ಶುಭಾಶುಭ ಸ್ಥಾನ ವ್ಯವಸ್ಥೆಯೇ ಭಂಗವಾಗುತ್ತದೆ.

ಒಂದು ವೇಳೆ ಪರವಾದಿಗಳ ಮಾತಿನಂತೆ ಮಹಾಪ್ರಲಯವೂ ಒಂದು ಸ್ಮಶಾನ ಎಂದಿಟ್ಟುಕೊಂಡರೂ ಹಾನಿಯಿಲ್ಲ. ಕೋಟ್ಯಾಂತರ ವರ್ಷಗಳಿಗೊಮ್ಮೆ ಆಗ ಶವಗಳನ್ನು ಮಲಗಿಸುತ್ತಾರೆ ಎಂದ ಮಾತ್ರಕ್ಕೆ ಅದು ಸರ್ವದಾ ಅಪವಿತ್ರವಾಗಬೇಕಾಗಿಲ್ಲ.

ಹಾಗಾದರೆ ಮಹಾಪ್ರಲಯ ಕಾಲದಲ್ಲಿ ವಿಷ್ಣು ಇರುವುದರಿಂದ ಅವನಿಗೂ ಸ್ಮಶಾನವಾಸಿತ್ವ ಬಂದು ಅವನೂ ಸಹ ಅಪವಿತ್ರನಾಗಬೇಕಾಗುವುದು ಎಂದರೇ,

ಇಲ್ಲ, ವಿಷ್ಣುವು ಸರ್ವಗತತ್ವನಾಗಿರುವುದರಿಂದ ಅವನು ಎಲ್ಲೆಲ್ಲೂ ಇದ್ದಾನೆ. ಸರ್ವಗತತ್ವ ಭಗವಂತನ ಗುಣವೇ ಹೊರತು ದೋಷವಲ್ಲ. ಸಮರ್ಥನಾದ, ಸ್ವಾಮಿಯಾದ ವಿಷ್ಣುವು ಸರ್ವತ್ರ ಇರುವನು, ಅವನು ದುಃಖ ಭಾಗಿಯಲ್ಲ ಎಂದು ಪೌತ್ರಾಯಣ ಶೃತಿ ಹಾಗೂ ಭಾಗವತ ತಂತ್ರಗಳು ಹೇಳಿವೆ. ಅದೂ ಅಲ್ಲದೆ, ಅವ್ಯಾಕೃತ ಆಕಾಶ ಹಾಗೂ ಕಾಲ ಇವೆರಡೂ ಸಹ ಮಹಾಪ್ರಲಯ ಕಾಲದಲ್ಲೂ ಇರುತ್ತವೆ. ಅಂದಮಾತ್ರಕ್ಕೆ ಸ್ಮಶಾನಭೂಮಿಯ ದುಷ್ಟತ್ವದಂತೆ ಅವ್ಯಾಕೃತ ಆಕಾಶದ ದುಷ್ಟತ್ವವನ್ನು ಯಾವ ಸ್ವಾಸ್ಥ ಚಿತ್ತನೂ ಹೇಳಲಾರ.

ಆದ್ದರಿಂದ ರುದ್ರದೇವರು ಅಪವಿತ್ರ ಸ್ಮಶಾನವಾಸಿಗಳಾಗಿರುವುದರಿಂದ ಅವರು ಸರ್ವೋತ್ತಮರಾಗಿರಲು ಸಾಧ್ಯವಿಲ್ಲ. ಶ್ರೀ ಹರಿಯೇ ಸರ್ವೋತ್ತಮ. (ಪ್ರಮಾಣ ವಚನಗಳನ್ನು ಸಂಸ್ಕೃತ ಆವೃತಿಯಲ್ಲಿ ನೋಡಿರಿ)

# ವಿಷ್ಣು ಸರ್ವೋತ್ತಮತ್ವ ಪ್ರತಿಪಾದಕ ಶ್ರುತಿಸ್ಮೃತಿ ಪ್ರಮಾಣಗಳು

## "ಮಾಣಿಕ್ಯ ಮಂಜರಿ"ಕಾರರ ಪೂರ್ವಪಕ್ಷ

"ಸದೇವ ಸೌಮ್ಯ ಇದಮಗ್ರ ಆಸೀತ್", "ಬ್ರಹ್ಮಾ ವಾ ಇದಮಗ್ರ ಆಸೀತ್" ಇತ್ಯಾದಿ ಸತ್, ಬ್ರಹ್ಮ ಶಬ್ಧ ಘಟಿತ ವಾಕ್ಯಗಳಿಂದ, ಕೈಲಾಸವಾಸಿಯಾದ ಉಮಾಪತಿ ರುದ್ರದೇವರೇ ಮಮುಕ್ಷುಗಳಿಂದ ಜ್ಞೇಯವಾದ ಪರತತ್ವವೆಂದು ತಿಳಿದು ಬರುತ್ತದೆ ಹೊರತು ನಾರಾಯಣನಲ್ಲ. ಅದೂ ಅಲ್ಲದೆ ಮುಂದೆ ಹೇಳಿರುವ " ಸೋಕಾಮಯತ, ಬಹುಸ್ಯಾಂ ಪ್ರಜಾಯೇಯ ", ಮೊದಲಾದ ವಾಕ್ಯಗಳ ಪರ್ಯಾಲೋಚನೆಯಿಂದ ಯಾವುದೋ ಒಂದು ಚೇತನವು ಜಗತ್ಕಾರಣವೆಂದು ತಿಳಿದು ಬಂದು, ಆ ಚೇತನವು ಯಾವ ದೇವತೆಯೆಂದು ಸಂಶಯ ಬಂದರೆ, ಅದನ್ನು ನಿವಾರಿಸುವ ಸಲುವಾಗಿ ಮುಂದೆ ಸಂಯುಕ್ತಮೇತತ್ ಕ್ಷರ ಮಕ್ಷರಂಚ ವ್ಯಕ್ತಾವ್ಯಕ್ತಂ ಭವತೇ ವಿಶ್ವಮೀಶಃ ಇತ್ಯಾದಿ ವಾಕ್ಯಗಳಿಂದ ಶಿವಾಪರನಾಮಕ ರುದ್ರನೇ ಜಗತ್ಕಾರಣವೆಂದು ತಿಳಿದು ಬರುತ್ತದೆ. ಆದ್ದರಿಂದ ಹಿಂದೆ ಹೇಳಿದ ಸದಾದಿ ಶಬ್ದೋದಿತ ದೇವತೆಯು ರುದ್ರನೆಂದು ವ್ಯಾಖ್ಯಾನಿಸತಕ್ಕದ್ದು.

ಹಾಗಾದರೆ,

"ಏಕೋ ಹ ವೈ ನಾರಾಯಣ ಆಸೀತ್" ಎಂಬ ಮಹಾನಾರಾಯಣೋಪನಿಷತ್ತಿನ ನಾರಾಯಣನ ಜಗತ್ಕಾರಣತ್ವ ಪ್ರತಿಪಾದಕ ವಾಕ್ಯದಿಂದ ವಿರೋಧ ಬರುತ್ತದೆಯಲ್ಲವೇ ಎಂದರೆ ಇಲ್ಲ. ಆ ವಾಕ್ಯವು "ಹ ವೈ" ಘಟಿತ ಅನುವಾದಕವಾಗಿರುವುದರಿಂದ ಸ್ವಯಂ ಅರ್ಥಪ್ರತಿಪಾದಕ ಸಾಮರ್ಥ್ಯರಹಿತವಾಗಿದೆ. ಆದ್ದರಿಂದ ವಿರೋಧವಿಲ್ಲ.

ಶ್ವೇತಾಶ್ವತರೋಪನಿಷತ್ತಿನಲ್ಲಿ ರುದ್ರನಿಗಿಂತ ಭಿನ್ನರಾದ ಅನ್ಯ ದೇವತೆಗಳ ಜ್ಞಾನಕ್ಕೆ ಮೋಕ್ಷ ಸಾಧನತ್ವ ನಿರಾಕರಣೆ ಮಾಡಿ ಕೇವಲ ಶಿವನಾಮಕ ರುದ್ರ ಜ್ಞಾನವೇ ಮೋಕ್ಷ ಸಾಧನವೆಂದು ಹೇಳಿದೆ. ಪುರುಷ ಸೂಕ್ತದಲ್ಲಿ ವಿಷ್ಣು ಜ್ಞಾನವೇ ಮೋಕ್ಷ ಕಾರಣವೆಂದು ಹೇಳಿದೆಯಲ್ಲ ಎಂದು ಆಕ್ಷೇಪ ಬಂದರೆ ತೊಂದರೆಯಿಲ್ಲ. ಏಕೆಂದರೆ ಪುರುಷಸೂಕ್ತ ವಿಷ್ಣುಪರ ಎಂಬ ವಿಷಯದಲ್ಲಿ ಪ್ರಮಾಣಗಳಿಲ್ಲ. ಯದ್ಯಪಿ "ಉತಾಮೃತತ್ವಸ್ಯೇಶಾನೋ" ಎಂಬ ರುದ್ರಬೋಧಕ ಈಶಾನ ಶಬ್ದ ಶ್ರವಣದಿಂದ, ಪುರುಷಸೂಕ್ತವೂ ಸಹ ರುದ್ರಪರತ್ವವೆಂದು ತಿಳಿದು ಬರುತ್ತದೆ.

ಅದೂ ಅಲ್ಲದೇ, "ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ" ಎಂಬ ಶ್ರೀಪತಿತ್ವಲಿಂಗದಿಂದ ಪುರುಷ ಸೂಕ್ತವು ವಿಷ್ಣು ಪರತ್ವವೆಂದು ಹೇಳಬಾರದು. ಏಕೆಂದರೆ ಶ್ರುತಿಗಿಂತ ಲಿಂಗವು ದುರ್ಬಲವಾದದ್ದು.

"ನಾರಾಯಣಾತ್ ಬ್ರಹ್ಮಾಜಾಯತೇ, ನಾರಾಯಣಾತ್ ರುದ್ರೋ ಜಾಯತೇ" ಎಂಬ ವಾಕ್ಯದಿಂದ ಸರ್ವಭೂತಕಾರಣನಾದ ಹಿರಣ್ಯಗರ್ಭನ ಉತ್ಪತ್ತಿನಂತರ ರುದ್ರನ ಉತ್ಪತ್ತಿ ಕಂಡುಬರುತ್ತದೆ.ರುದ್ರನು ಕಾರ್ಯಕೋಟಿ ಪ್ರವಿಷ್ಟನಾದ್ದರಿಂದ ಅವನಿಗೆ ಜಗತ್ಕಾರಣತ್ವ ಕೂಡವುದಿಲ್ಲವೆಂದರೆ,

ಇಲ್ಲ. ಹಾಗೆ ಹೇಳಿದರೆ ಶ್ವೇತಾಶ್ವತರ ಉಪನಿಷತ್ತಿನಿಂದ ವಿರೋಧ ಬರುತ್ತದೆ. ಅದೂ ಅಲ್ಲದೆ, ನಾರಾಯಣೋಪನಿಷತ್ತಿನಲ್ಲಿ ಹೇಳಿರುವ ರುದ್ರ ಬೇರೆಯೇ ಎಂದು ಹೇಳಲು ಯಾವ ಬಾಧಕಗಳೂ ಇಲ್ಲ. ಆದ್ದರಿಂದಲೇ ಶ್ವೇತಾಶ್ವತರ ಉಪನಿಷತ್ತಿನಲ್ಲಿ "ಕೇವಲ" ಶಬ್ದ ಪ್ರಯೋಗವಾಗಿದೆ. ರುದ್ರನು ಜಗತ್ಕಾರಣನಲ್ಲವೆಂದು ಹೇಳಿದರೆ, "ಯೋ ದೇವಾನಾಂ ಪ್ರಥಮಂ ಪುರಸ್ತಾತ್..." ಎಂಬ ಹಿರಣ್ಯಗರ್ಭನು ರುದ್ರದಿಂದ ಉತ್ಪತ್ತಿ ಎಂಬುದುಕೂಡುವುದಿಲ್ಲ. ನಾರಾಯಣೋಪನಿಷತ್‌ನ ನಾರಾಯಣನಿಂದ ರುದ್ರೋತ್ಪತ್ತಿ ಎಂಬುದು ಕೇವಲ ಅರ್ಥವಾದವೆಂದು ಹೇಳುತ್ತೇವೆ.

ಆದ್ದರಿಂದ ಸರ್ವಾಧಿಕನಾಗಿರುವುದರಿಂದಲೂ, ಜಗತ್ಕಾರಣನಾಗಿರುವುದರಿಂದಲೂ, ಮೋಕ್ಷಪ್ರದನಾದ್ದರಿಂದಲೂ, ಶಿವನೇ ಮುಮುಕ್ಷುಗಳಿಂದ ಜ್ಞೇಯವಾದ ಪರತತ್ವ ಎಂಬುದಾಗಿ ತಿಳಿಯಬೇಕು. ಆದ್ದರಿಂದಲೇ ಅವನು ಸರ್ವೋತ್ತಮ.

## "ಗೋಮಂಜರಿ"ಕಾರರ ಉತ್ತರ

"ಸರ್ವೇ ವೇದಾಃ ಯತ್ಪದಮಾಮನಂತಿ ತಪಾಂಸಿ ಸರ್ವಾಣಿ ಚ
ಯದ್ವದಂತಿ" (ಕಠೋಪನಿಷತ್), "ವೇದೈಶ್ಚ ಸರ್ವೈರಹಮೇವ ವೇದ್ಯೋ
ವೇದಾಂತಕೃತ್ ವೇದ ವಿದೇವ ಚಾಹಂ" (ಗೀತಾ)
"ತಾವಾ ಏತಾ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾಃ
ಏಕೈವ ವಾಹೃತಿ । ಪ್ರಾಣ ಏವ ಪ್ರಾಣ ಋಚ ಇತ್ಯೇವ ವಿದ್ಯಾತ್" (ಐತರೇಯ),
"ನಾಮಾನಿ ಸರ್ವಾನಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ",
"ಸರ್ವಾಣಿ ರೂಪಾಣಿ ವಿಚಿಂತ್ಯಧೀರಃ ನಾಮಾನಿ ಕೃತ್ಯಾಭಿವದನ್ಯದಾಸ್ತೆ", "ತಮೇವಂ

ವಿದ್ವಾನ್ ಅಮೃತ ಇಹಭವತಿ," "ಯೋ ದೇವಾನಾಂ ನಾಮಧಾ ಏಕ ಏವ ತಂ ಸಂಪ್ರಶ್ನಂ ಭುವನಾಯಂತ್ಯನ್ಯಾ", "ಚತುರ್ಭಿಃ ಸಾಕಂ ನವತಿಂ ಚ ನಾಮಾಭಿಃ ಚಕ್ರಂ ನ ವೃತ್ತಂ ವ್ಯತೀರವೀವಿಪತ್", "ಪರೋಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಂ ಅನ್ವಶ್ನುವಂತಿ", "ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಿಮಂತಮಾಪ ", "ಯೋನಃ ಪಿತಾ ಜನಿತಾ ಯೋ ವಿಧಾತಾ ಧಾಮಾನಿ ವೇದ ಭುವನಾನಿ ವಿಶ್ವಾ", ಇತ್ಯಾದಿ ಪ್ರಮಾಣಗಳಿಂದ ಶ್ರೀಹರಿಯ ಸರ್ವೋತ್ತಮತ್ವವು ಹಾಗೂ ಸಕಲ ವೇದಪ್ರತಿಪಾದಕತ್ವವು ತಿಳಿದು ಬರುತ್ತದೆ.

ನಾರಾಯಣನೇ ಸಕಲ ಮುಮುಕ್ಷುಗಳಿಂದ ಉಪಾಸ್ಯಮಾನವಾದ ಪರತತ್ವ. ಬೇರೆ ಯಾವುದೇ ಅಲ್ಲ.

"ಏಕೋ ಹ ವೈ ನಾರಾಯಣಃ ಆಸೀತ್ ನ ಬ್ರಹ್ಮ ನ ಈಶಾನಃ"ಮೊದಲಾದ ಮಹೋಪನಿಷತ್ ವಾಕ್ಯಗಳು, "ಅಥ ಪುರುಷೋ ಹ ವೈ ನಾರಾಯಣೋಽಕಾಮ ಯತ್ ಪ್ರಜಾಸೃಜೇಯೇತಿ । ನಾರಾಯಣಾತ್ ಬ್ರಹ್ಮಾ ಜಾಯತೇ ನಾರಾಯಣಾತ್ ರುದ್ರೋ ಜಾಯತೇ, ನಾರಾಯಣಾತ್ ಇಂದ್ರೋ ಜಾಯತೇ..." ಸರ್ವಾಣಿ ಚ ಭೂತಾನಿ ನಾರಾಯಣಾದೇವ ಸಮುತ್ಪದ್ಯಂತೇ । "ನಾರಾಯಣೇ ಪ್ರಲೀಯಂತೇ" ಮೊದಲಾದ ನಾರಾಯಣೋಪನಿಷತ್ ವಾಕ್ಯಗಳಿಂದ ಸೃಷ್ಟಿ ಕಾಲದ ಪೂರ್ವದಲ್ಲಿ ಹಿರಣ್ಯಗರ್ಭ ರುದ್ರಾದಿಗಳು ಇರಲಿಲ್ಲವೆಂದು ಕೇವಲ ನಾರಾಯಣ ಮಾತ್ರ ಇದ್ದನೆಂದು ತಿಳಿದು ಬರುವುದರಿಂದ ಪ್ರಜಾಪತಿ, ರುದ್ರಾದಿಗಳಿಗೂ ಸಹ ನಾರಾಯಣನೇ ಕಾರಣನೆಂದು ಅರ್ಥಾತ್ ಸಕಲ ಜಗತ್ಕಾರಣನೆಂದೂ ತಿಳಿದು ಬರುತ್ತದೆ.

ಇನ್ನು ಮಾಣಿಕ್ಯಮಂಜರಿಕಾರದ ಅಭಿಪ್ರಾಯದಂತೆ,

"ಏವಂ ಕಲ್ಪೇಷು, ಕಲ್ಪೇಷು ಬ್ರಹ್ಮ ವಿಷ್ಣು ಮಹೇಶ್ವರಾಃ"
ಪರಸ್ಪರ ಸ್ಮಾತ್ ಜಾಯಂತೇ ಪರಸ್ಪರಜಯೈಷಿಣಃ

ಅಂದರೆ ಒಂದೊಂದು ಕಲ್ಪದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರು ಒಬ್ಬರಿಂದ ಒಬ್ಬರು ಹುಟ್ಟುತ್ತಾರೆ. ಆದ್ದರಿಂದ ಒಂದೊಂದು ಕಲ್ಪದಲ್ಲಿ ಒಬ್ಬೊಬ್ಬರು ಜಗತ್ಕಾರಣರಾಗಬೇಕು. ಹೀಗೆ ಕಲ್ಪಭೇದದಿಂದ ಶಿವನೂ ಜಗತ್ಕಾರಣನಾಗಬಹುದು ಎಂಬ ವಾದ ಸರಿಯಲ್ಲ. ಕಲ್ಪಭೇದ ಜಗತ್ಕಾರಣ ವ್ಯವಸ್ಥಾ ಕೊಡುವುದಿಲ್ಲ.

"ಅನ್ಯಸ್ಮಾತ್ ಸೃಷ್ಟಿ ಸಂಹಾರೌ ಸ್ಥಿತಿಶ್ಚ ಪರಮಾತ್ಮನಃ
ನಿರೂಪಿತಾ ನ ವಿದ್ವದ್ಭಿಃ ಪ್ರಮಾಣಾಭಾವತೋ ಹರೇಃ" ಎಂಬ
ಬ್ರಹ್ಮತರ್ಕವಚನದಿಂದಲೂ ಕಲ್ಪಭೇದ ವ್ಯವಸ್ಥೆ ನಿರಾಸ್ತವಾಗುತ್ತದೆ.

**ಅಲ್ಲದೇ, "ಓಂ ಅನೇನ ಸರ್ವಗತತ್ವಮಾಯಮಯಶಬ್ದಾದಿಭ್ಯಃ ಓಂ" ||**

ಎಂಬ ಬ್ರಹ್ಮಸೂತ್ರ ವ್ಯಾಖ್ಯಾನದಲ್ಲಿ ಶ್ರೀ ಮಧ್ವಾಚಾರ್ಯರು ಭಾಲ್ಲವೇಯ ಹಾಗೂ ಚತುರ್ವೇದಶಿಖಾ ಮೊದಲಾದ ಶ್ರುತಿಗಳನ್ನು ಉದಾಹರಿಸಿ ಸರ್ವದೇಶಕಾಲ ವಸ್ತುವಿನಿಂದಲೇ ಸೃಷ್ಟ್ಯಾದಿಗಳು ಪ್ರವೃತ್ತವಾಗುತ್ತವೆ. ಅಂತಹ ಸರ್ವ ದೇಶ ಕಾಲ ವ್ಯಾಪ್ತ ವಸ್ತು ಶ್ರೀ ವಿಷ್ಣುವೇ ಎಂದು ನಿರೂಪಿಸಿದ್ದಾರೆ.

**ಪುರುಷ ಸೂಕ್ತ ವಿಷ್ಣು ಪರತ್ವ**

"ಮಾಣಿಕ್ಯ ಮಂಜರಿ"ಕಾರರು ಹೇಳುವಂತೆ, ಮೋಕ್ಷ ಸಾಧನ ಜ್ಞಾನ ವಿಷಯತ್ವ ರುದ್ರವೃತ್ತಿಯಲ್ಲ. ಅಂದರೆ ರುದ್ರ ವಿಷಯ ಜ್ಞಾನದಿಂದ ಮೋಕ್ಷವಾಗುವುದಿಲ್ಲ. ಏಕೆಂದರೆ ಪುರುಷಸೂಕ್ತದಲ್ಲಿ ಮೋಕ್ಷ ಸಾಧನ ಜ್ಞಾನ ವಿಷಯವು ವಿಷ್ಣುಪರವಾಗಿದೆ.

ಪುರುಷ ಸೂಕ್ತವು ವಿಷ್ಣು ಪರವಲ್ಲವೆಂದು ಹೇಳಬಾರದು.

**ಯಥಾ ಹಿ ಪೌರುಷಂ ಸೂಕ್ತಂ ವಿಷ್ಣೋರೇವಾಭಿಧಾಯಕಂ ||**
**ನ ತಥಾ ಸರ್ವವೇದಾಶ್ಚ ವೇದಾಂಗಾನಿ ಚ ನಾರದ ||**
**ಎಂಬ ಬೃಹತ್ಸಂಹಿತಾ ವಾಕ್ಯದಿಂದಲೂ**

**"ಯಥಾ ಹಿ ಪೌರುಷಂ ಸೂಕ್ತಂ ನಿತ್ಯಂ ವಿಷ್ಣುಪರಾಯಣಂ |**
**ತಥೈವ ಮೇ ಮನೋ ನಿತ್ಯಂ ವಿಷ್ಣುಪರಾಯಣಂ ||"** ಎಂಬ ಬ್ರಹ್ಮ ವಚನದಿಂದಲೂ,

**"ಜಗಾಮ ಸತ್ರಿನಯನಸ್ತೀರಂ ಕ್ಷೀರಪಯೋನಿಧೇಃ |**
**ತತ್ರಗತ್ವಾಜಗನ್ನಾಥಂ ದೇವದೇವಂ ವೃಷಾಕಪಿಂ ||**
**ಪುರುಷಂ ಪುರುಷ ಸೂಕ್ತೇನ ಉಪತಸ್ಥೇ ಸಮಾಹಿತಃ | "**

ಎಂಬ ಶ್ರೀ ಮದ್ಭಾಗವತ ವಚನದಿಂದಲೂ ಸಹ ಪುರುಷ ಸೂಕ್ತ ವಿಷ್ಣುಪರ ಎಂಬುದು ವೇದ್ಯವಾಗುತ್ತದೆ.

ಈ ಮೇಲಿನ ವಾಕ್ಯಗಳಲ್ಲಿ ಪುರುಷಸೂಕ್ತ ಪ್ರತಿಪಾದ್ಯ ವಿಷ್ಣು ಎಂದು, ಎಲ್ಲೂ ಹೇಳಿಲ್ಲವೆಂದು ಆಕ್ಷೇಪಿಸಿದರೇ,

ಇದು ಸರಿಯಲ್ಲ.

ಒಂದು ವೇಳೆ ಪುರುಷಸೂಕ್ತ ವಿಷ್ಣ್ವೇತರ ಪರವಾಗಿದ್ದರೆ, ಬ್ರಹ್ಮ ರುದ್ರಾದಿಗಳು ಕ್ಷೀರಸಮುದ್ರದ ಬಳಿಗೆ ಹೋಗಿ ಪುರುಷಸೂಕ್ತದಿಂದ ವಿಷ್ಣುವನ್ನು ಸ್ತೋತ್ರ ಮಾಡುವುದು ಅನುಚಿತವಾಗುತ್ತಿತ್ತು. ಆದೂ ಅಲ್ಲದೆ, ಬ್ರಹ್ಮರುದ್ರಾದಿಗಳೇ ಸ್ವಯಂ ಪುರುಷ ಸೂಕ್ತದಿಂದ ಸ್ತೋತ್ರ ಮಾಡಿರುವುದರಿಂದ ಅವರು ಪುರುಷಸೂಕ್ತ ಪ್ರತಿಪಾದ್ಯರಲ್ಲವೆಂದೂ, ಸಾಕ್ಷಾತ್ ಶ್ರೀ ಹರಿಯೇ ಪ್ರತಿಪಾದ್ಯನೆಂದು ತಿಳಿದು ಬರುತ್ತದೆ. ಜ್ಞಾನಿಗಳು ಈ ವಿಷಯದಲ್ಲಿ ಸಂದೇಹ ಪಡುವುದಿಲ್ಲ.

**ಆಕ್ಷೇಪ** : ಹಾಗಾದರೇ ಶ್ರೀಮದ್ಭಾಗವತದಲ್ಲಿ
ಅಹಂ ಬ್ರಹ್ಮಾಚ ಶರ್ವಶ್ಚ ಜಗತಃ ಕಾರಣಂ ಪರಂ ।
ಆತ್ಮೇಶ್ವರ ಉಪದ್ರಷ್ಟಾ ಸ್ವಯಂದೃಗವಿಶೇಷಿಣಃ ॥

ಎಂಬುದಾಗಿ ಬ್ರಹ್ಮ ವಿಷ್ಣು ಮಹೇಶ್ವರರಿಗೆ ಸ್ಫುಟವಾಗಿ ಅಬೇಧವನ್ನು ಹೇಳಿದೆ. ಆದ್ದರಿಂದ ರುದ್ರ ಜಗತ್ಕಾರಣನೆಂದು ಹೇಳಿದರೆ ತಪ್ಪಿಲ್ಲ ಎಂದರೇ,

ಅದು ಸರಿಯಲ್ಲ

"ಅಂತರ್ಯಾಮಿ ಸ್ವರೂಪೇಣ ಬ್ರಹ್ಮರುದ್ರಾದ್ಯಭಿನ್ನತಾ "
ಎಂಬುದಾಗಿ ಭವಿಷ್ಯ, ಗರುಡ ಪುರಾಣಗಳ ಉದಾಹರಣೆಯನ್ನು ಕೊಟ್ಟು ಶ್ರೀ ಮಧ್ವಾಚಾರ್ಯರು, ಸರ್ವಭೂತಾತ್ಮನಾ ಸರ್ವಭೂತಾಂತರ್ಯಾಮಿತ್ವಮೇವ ಎಂಬುದಾಗಿ ಅಂತರ್ಯಾಮಿ ವಿವಕ್ಷಾದಿಂದ ಈವಾಕ್ಯವನ್ನು ಸರಿಯಾಗಿ ವ್ಯವಸ್ಥೆ ಮಾಡಿದ್ದಾರೆ.

ಈ ಎಲ್ಲ ಶ್ರುತಿಸ್ಮೃತಿ ಪ್ರಮಾಣಗಳ ಅವಲೋಕನದಿಂದ ಶ್ರೀ ವಿಷ್ಣುವೇ ಸರ್ವೋತ್ತಮವೆಂದೂ ಜಗತ್ಕಾರಣನೆಂದು ತಿಳಿದುಬರುತ್ತದೆ.

## ತಪ್ತಮುದ್ರಾಧಾರಣ ಶಾಸ್ತ್ರ ವಿಹಿತ

ವೈಷ್ಣವರ ಅತ್ಯಂತ ಪವಿತ್ರ ವಿಹಿತ ಕರ್ಮವಾದ ಗೋಪಿಚಂದನ ಧಾರಣೆ ಹಾಗೂ ತಪ್ತಮುದ್ರಾಧಾರಣೆಯನ್ನು"ಮಾಣಿಕ್ಯಮಂಜರಿ"ಕಾರರು ಪ್ರಬಲವಾಗಿ ಖಂಡಿಸಿದ್ದಾರೆ. ಅವರ ಪ್ರಕಾರ ತಪ್ತಮುದ್ರಾಧಾರಣೆ ಅತ್ಯಂತ ನಿಷಿದ್ಧ. ಸ್ಮಶಾನದಲ್ಲಿರುವ ಕಟ್ಟಿಗೆ ಹೇಗೆ ನಿರುಪಯುಕ್ತವೋ ಹಾಗೆಯೇ ತಪ್ತಮುದ್ರಾಧಾರಣೆ ಮಾಡಿದವರು ಸರ್ವಕರ್ಮ ಬಹಿಷ್ಕೃತನಾಗುತ್ತಾರೆ ಎಂದು ಅವರ ವಾದ,

ಇದು ಸರಿಯಲ್ಲ.

ತಪ್ತಮುದ್ರಾಧಾರಣೆ ಅತ್ಯಂತ ಆವಶ್ಯಕ ಎಂಬ ವಿಷಯದಲ್ಲಿ ಅನೇಕ ಪ್ರಮಾಣಗಳಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಉದಾಹರಿಸಲಾಗಿದೆ.

**"ಪ್ರವಿತ್ರಂ ತೇ ವಿತತಂ ಬ್ರಾಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪ್ರರ್ಯೇಷಿ ವಿಶ್ವತಃ ಅತಪ್ತತನೂರ್ನತದಾಮೋ ಅಶ್ನುತೇ ಶ್ರುತಾಸ ಇದ್ವಹನ್ತಸ್ತಸಮಾಶತ" ॥**

ಈ ಮಂತ್ರದ ಅರ್ಥ ಹೀಗಿದೆ : ವೇದಗಳ ಚತುರ್ಮುಖನ ಅಥವಾ ಸರ್ವರಿಗೂ ಸ್ವಾಮೀಯಾದ ಹೇ ಹರೇ, ನೀನು ಸರ್ವನಿಯಾಮಕನಾಗಿ ಸರ್ವರ ದೇಹಗಳಲ್ಲಿ ಅಂತರ್ಯಾಮಿಯಾಗಿ ಇದ್ದೀಯೆ. ನಿನ್ನ ಸುದರ್ಶನ ಚಕ್ರವು ಸಹ ಇದೇ ರೀತಿಯಾಗಿ ಇದೆ. ಆ ಚಕ್ರವು, ಸಂಸ್ಕಾರ ರಹಿತನಾಗಿ ಪಾಪಯುಕ್ತವಾಗಿರುವ ನನ್ನ ಶರೀರವನ್ನು ಪವಿತ್ರವನ್ನಾಗಿ ಮಾಡಿ ನಿನ್ನ ಸ್ಥಾನವಾದ ಮೋಕ್ಷವನ್ನು ತಂದುಕೊಡುತ್ತದೆ.

ಇಲ್ಲಿ"ಪವಿತ್ರ" ಎಂಬ ಶಬ್ದಕ್ಕೆ "ಸುದರ್ಶನ" ಎಂದು ಅರ್ಥ ಮಾಡಲಾಗಿದೆ. ಇದು ಸರಿಯಲ್ಲ, ಪ್ರಸಿದ್ಧಾರ್ಥ ಪರಿತ್ಯಾಗದಿಂದ ದೋಷ ಬರುತ್ತದೆ ಎಂದರೆ, ಇಲ್ಲ "ಸುದರ್ಶನೆ ಚ ಧರ್ಭೆ ಪವಿತ್ರಂ ಶಣ" ಸೂತ್ರಕೆ "ಸುದರ್ಶನಂ ಸಹಸ್ರಾರಂ ಪವಿತ್ರಂ ಚರಣಂ ಪವಿಃ", "ಪವಿತ್ರಂ ಚರಣಂ ನೇಮಿರರಿಶ್ಚಕ್ರಂ ಸುದರ್ಶನಂ" ಇತ್ಯಾದಿ ಪ್ರಮಾಣಗಳಿಂದ ಪವಿತ್ರ ಶಬ್ದಕ್ಕೆ ಸುದರ್ಶನ ಎಂಬ ಅರ್ಥವಿದೆ. ಅದೂ ಅಲ್ಲದೆ, ಪವಿತ್ರವೆಂದರೆ ಪಾವನಗೊಳಿಸುವುದು ಎಂದು ಅರ್ಥ. ಸುದರ್ಶನ ಚಕ್ರವೂ ಸಹ ಸ್ಪರ್ಶನದಿಂದ ದೇಹವನ್ನು ಪವಿತ್ರ ಮಾಡುತ್ತದೆ. ಆದ್ದರಿಂದ ಪವಿತ್ರ ಶಬ್ದಕ್ಕೆ ಸುದರ್ಶನ ಎಂದು ಅರ್ಥೈಸುವುದರಿಂದ ಯಾವ ದೋಷವೂ ಇಲ್ಲ. ಗೋಪಿಚಂದನಧಾರಣ ಹಾಗೂ ತಪ್ತಮುದ್ರಾಧಾರಣ ವಿಷಯದಲ್ಲಿ ಬೃಹದಾರಣ್ಯಕ, ಬಾಷ್ಕಲಶಾಖಾ,

ಅಥರ್ವಮಹೋಪನಿಷತ್, ಕಠಶಾಖಾ, ಮೊದಲಾದ ಶ್ರುತಿಗಳೂ, ಶಾಂಡಿಲ್ಯ, ಶಂಖ, ಯಮ, ವ್ಯಾಸ, ಮೊದಲಾದ ಸ್ಮೃತಿಗಳೂ, ಮಹಾಭಾರತ, ಹರಿವಂಶ, ವಿಷ್ಣುಧರ್ಮ, ಪುಂಡರೀಕಾಖ್ಯಾನ ಮೊದಲಾದವುಗಳು, ಪದ್ಮ, ಗಾರುಡ ಮೊದಲಾದ ಪುರಾಣಗಳು ಪ್ರಮಾಣವಾಗಿದೆ. (ಪ್ರಮಾಣ ವಾಕ್ಯಗಳಿಗೆ ಸಂಸ್ಕೃತ ಆವೃತ್ತಿಯನ್ನು ನೋಡಿ)

ಇವುಗಳೆಲ್ಲದರ ಪರ್ಯಾಲೋಚನದಿಂದ ಗೋಪಿಚಂದನ, ತಪ್ತಮುದ್ರಾಧಾರಣವು ಶಾಸ್ತ್ರವಿಹಿತವೆಂದೂ ತಿಳಿದುಬರುತ್ತದೆ. ಆದ್ದರಿಂದ "ಮಾಣಿಕ್ಯಮಂಜರಿ" ಕಾರರ ವಾದವೇ ದೋಷಯುಕ್ತವಾಗಿದೆ.

## ಶ್ರೀ ಮಧ್ವಾಚಾರ್ಯರು ಶ್ರುತ್ಯುಕ್ತ ಗುರುಗಳು

"ಮಾಣಿಕ್ಯಮಂಜರಿ"ಕಾರರು"ಮಧ್ವದೈತ್ಯ"ನ ಜನನವನ್ನು ತಿಳಿಸುತ್ತಾ"ಮಧ್ಯಗೇಹ" ಎಂಬ ಪದವನ್ನು "ಮದ್ಯಸ್ಯ ಗೇಹಂ ಯಸ್ಯ ತಂ" ಎಂಬುದಾಗಿ ಮದ್ಯಪಾನ ಮಾಡುವವರ ಮನೆ ಎಂಬುದಾಗಿಯೂ ಅಥವಾ "ಮಧ್ಯಂ ಗತಾ ಮಧ್ಯಗಾ ಇಹಾ ಇಚ್ಛಾ ಯಸ್ಯ ತಂ" - ಮಧ್ಯಾಭಿಲಾಷಿಣಿ ಎಂಬುದಾಗಿ ವ್ಯಾಖ್ಯಾನ ಮಾಡಿ ಅನೇಕ ಪುರುಷರುಗಳ ಮಧ್ಯೆ ಇರಲು ಇಚ್ಛಿಸುವವಳು ಅರ್ಥಾತ್ ಜಾರ ಸ್ತ್ರೀ ಎಂಬುದಾಗಿ ಅರ್ಥ ಮಾಡಿ, ಇಂತಹ ಮನೆಯಲ್ಲಿ ಅಥವಾ ಇಂತಹ ಜಾರಸ್ತ್ರೀಯಲ್ಲಿ "ಮಧ್ವ"ಹುಟ್ಟಿದನು ಎಂಬುದಾಗಿ ಹೇಳಿದ್ದಾರೆ. ಅದಕ್ಕೆ ಸೌರಪುರಾಣಾದಿ ವಾಕ್ಯಗಳನ್ನು ಉದಾಹರಿಸಿದ್ದಾರೆ. ಇದು ಅತ್ಯಂತ ಅಯುಕ್ತ.

ಶ್ರುತ್ಯುಕ್ತ ಗುರುಗಳಾದ ಶ್ರೀಮಧ್ವಾಚಾರ್ಯರು ಒಬ್ಬ ಜಾರ ವಿಧವಾ ಸ್ತ್ರೀಯ ಮಗನಾಗಿರಲು ಸಾಧ್ಯವಿಲ್ಲ.

**"ಆದಿನ್ಮಾತೃರಾವಿಶದ್ ಯಾಸ್ವಾಶುಚಿರಹಿಂಸ್ಯ ಮಾನ ಉರ್ವಿಯಾವಿವಾವೃಧೇ"।** (ಬಳಿತ್ಥಾಸೂಕ್ತ) ಎಂಬ ವೇದವಾಕ್ಯವು ಶ್ರೀ ವಾಯುದೇವರು ಲಕ್ಷ್ಮೀನಾರಾಯಣರ ಅಪ್ಪಣೆಯಿಂದ ತನ್ನ ಮೂರು ಅವತಾರಗಳಲ್ಲಿ ತಮ್ಮ ತಾಯಂದಿರ ಗರ್ಭವನ್ನು ಪ್ರವೇಶ ಮಾಡಿದರು. ಅವರು ಸ್ವಸಾಮರ್ಥ್ಯದಿಂದಲೇ ಎಲ್ಲಾ ರೀತಿಯ ದುಷ್ಕರ್ಮಗಳಿಂದಲೂ ಅಸ್ಪೃಷ್ಟರಾಗಿದ್ದರು. ಅವರು ಯಾವ ಗರ್ಭವಾಸಾದಿ ದುಃಖಗಳನ್ನು ಹೊಂದದೆ ಬೆಳೆದರು ಎಂಬುದಾಗಿ

ಘೋಷಿಸುತ್ತಿರುವಾಗ ಹೇಗೆ ಅವರ ತಾಯಿಯ ಜಾರಿಣಿಯಾಗುತ್ತಾಳೆ? ಆದ್ದರಿಂದ ನಮ್ಮ ಗುರುಗಳಾದ ಮಧ್ವಾಚಾರ್ಯರು ದೈತ್ಯರಲ್ಲ.

ಸೌರ ಪುರಾಣದಲ್ಲಿ "ತದಾಂಧ್ರದೇಶೇ ವಿಕಲೇ ದಾಕ್ಷಿಣಾತ್ಯಾಂ ಭವಿಷ್ಯತಿ" ಎಂದಿದೆ. ಅಂದರೆ "ಮಧ್ವ ದೈತ್ಯ"ನು ದಕ್ಷಿಣದ ಆಂಧ್ರಪ್ರದೇಶದಲ್ಲಿ ಹುಟ್ಟುತ್ತಾನೆ ಎಂದಿದೆ. ಆದರೆ ಶ್ರೀ ಮಧ್ವಾಚಾರ್ಯರು ಆಂಧ್ರದೇಶದಲ್ಲಿ ಅವತರಿಸಿದರೆಂದು ಮೂರ್ಖರು ಮಾತ್ರ ಹೇಳಲು ಸಾಧ್ಯ. ಶ್ರೀ ಮಧ್ವಾಚಾರ್ಯರ ಅವತಾರವಾದರೋ ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆ ಪರಶುರಾಮ ಕ್ಷೇತ್ರದ ರಜತಪೀಠಪುರದ ಬಳಿಯಿರುವ ಪಾಜಕ ಕ್ಷೇತ್ರದಲ್ಲಿ ಆಯಿತೆಂಬ ವಿಷಯ ಪ್ರಸಿದ್ಧಿಯಾಗಿದೆ. ಇಂದಿಗೂ ಸಹ ನಾವು ಪಾಜಕ ಕ್ಷೇತ್ರದಲ್ಲಿ ಆಚಾರ್ಯರು ಅವತಾರ ಮಾಡಿದ ಮನೆ, ಅಕ್ಷರಾಭ್ಯಾಸ ಶಿಲೆ, ವಾಸುದೇವತೀರ್ಥ, ಮಧ್ಯಗೇಹಭಟ್ಟರು ಪೂಜಿಸಿದ ದೇವತಾ ವಿಗ್ರಹಗಳು, ಆಚಾರ್ಯರು ಸರ್ಪರೂಪ ಮಣಿಮಂತನನ್ನು ಸಂಹರಿಸಿದ ಸ್ಥಳ. ದುರ್ಗಾಬೆಟ್ಟ, ಕುಂಜಾರುಗಿರಿ ಎಲ್ಲವನ್ನೂ ಕಣ್ಣಾರೆ ನೋಡಬಹುದು. ಆಂಧ್ರಪ್ರದೇಶದಲ್ಲಿ ಇವರು ಹುಟ್ಟಿದ ಯಾವ ಪ್ರದೇಶವಿಲ್ಲ. ಅದರ ಕುರುಹುಗಳೂ ಇಲ್ಲ. ಪ್ರಸಿದ್ಧಿಯೂ ಇಲ್ಲ.

ಸ್ಕಾಂದಪುರಾಣದಲ್ಲಿ -

"ಪ್ರಾದುರಾಸೀತ್ ವಿಪ್ರಕುಲೇ ಕ್ಷೇತ್ರೇ ಭಾರ್ಗವಸಂಜ್ಞಿಕೇ ಆನಂದತೀರ್ಥನಾಮೇತಿ ಗುರುಣಾ ಸ್ಥಾಪಿತೋ ಭುವಿ" ಎಂಬುದಾಗಿ ಸ್ಪಷ್ಟ ವಚನವಿದೆ.

1. "ಭೂತ್ವಾ ಕ್ಷೇತ್ರೇ ವಿಶುದ್ಧೇ ದ್ವಿಜಗುಣನಿಲಯೇ **ರೌಪ್ಯಪೀಠಾಭಿಧಾನೇ**"
   - "ವಾಯುಸ್ತುತಿ" - ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರು
2. "ಯತ್ರಪ್ರಾದುರಭೂತ್ ವಾಯುಃ ಕ್ಷೇತ್ರಂ **ತತ್ಪಾಜಕಂ ಶುಭಂ**"
   - "ಸಂಪ್ರದಾಯಪದ್ಧತಿ" - ಶ್ರೀ ಹೃಷೀಕೇಶತೀರ್ಥರು
3. "ಕ್ಷೇತ್ರಂ ಸ **ಪಾಜಕಪದಂ** ತ್ರಿಕುಲೈಕಕೇತುಂ"
   - "ಶ್ರೀ ಸುಮಧ್ವವಿಜಯ" - ಶ್ರೀ ನಾರಾಯಣ ಪಂಡಿತಾಚಾರ್ಯರು

4. "ಪವಿತ್ರಂ ಪಾಜಕ ಕ್ಷೇತ್ರಂ ಕೋನಸೇವೇತ ಕೋವಿದಃ"
- "ತೀರ್ಥಪ್ರಬಂಧ" - ಶ್ರೀ ವಾದಿರಾಜರು

ಮೊದಲಾದ ಅನೇಕ ಪ್ರಾಚೀನ ಗುರುವಾಕ್ಯಗಳು ಈ ವಿಷಯದಲ್ಲಿ ಪ್ರಮಾಣಗಳಾಗಿವೆ. ಇದರಿಂದ ಶ್ರೀ ಮಧ್ವಾಚಾರ್ಯರ ಅವತಾರವು ರಜತಪೀಠದ ಬಳಿಯಿರುವ ಪಾಜಕ ಕ್ಷೇತ್ರದಲ್ಲೇ ಹೊರತು ಆಂಧ್ರದೇಶದಲ್ಲಲ್ಲ ಎಂಬುದು ತಿಳಿದು ಬರುತ್ತದೆ.

"ಮಾಣಿಕ್ಯಮಂಜರಿ" ಯಲ್ಲಿ "ಮಧ್ವದೈತ್ಯ"ನ ಜನ್ಮವು ಆಷಾಢ ಕೃಷ್ಣ ಚತುರ್ಥಿಯಂದು ಆಯಿತು ಎಂದು ಹೇಳಿದೆ.

ಆದರೆ ಶ್ರೀ ಮಧ್ವಾಚಾರ್ಯರ ಅವತಾರವು ಮಾಘ ಶುಕ್ಲಸಪ್ತಮಿ "ರಥಸಪ್ತಮಿ" ದಿನದಂದು ಆಯಿತು ಎಂಬುದಾಗಿ ವಾಯು ಪುರಾಣದ ವಚನವಿದೆ. ಇವೆಲ್ಲದರ ಅವಲೋಕನದಿಂದ ಸೌರ ಪುರಾಣೋಕ್ತ "ಮಧ್ವದೈತ್ಯ"ನು ಬೇರೆ. ವೇದ ಪ್ರತಿಪಾದ್ಯರಾದ ನಮ್ಮ ಗುರುವರ್ಯರಾದ ಶ್ರೀ ಮಧ್ವಾಚಾರ್ಯರು ಬೇರೆ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ.

**ನಮ್ಮ ಗುರುಗಳು ಜೀವೋತ್ತಮರಾದ ವಾಯುದೇವರ ಅವತಾರವೇ.**

## ಶ್ರೀ ಮಧ್ವಾಚಾರ್ಯರ ವೇದ ವರ್ಣಿತ ಗುಣಗಳು

ಶ್ರೀ ವಾಯುದೇವರ ತೃತೀಯಾವತಾರರಾದ ಶ್ರೀ ಮಧ್ವಾಚಾರ್ಯರ ದಿವ್ಯ ಚರಿತ್ರೆಯನ್ನು ವರ್ಣಿಸುವ "ಶ್ರೀ ಸುಮಧ್ವ ವಿಜಯ" ದಲ್ಲಿ ಪಂಡಿತಾಚಾರ್ಯರು "ತಾಂ ಮಂತ್ರವರ್ಣೈರನುವರ್ಣನೀಯಾಂ" ಎಂಬುದಾಗಿ ಹೇಳಿ "ಬಳಿತ್ಥಾ ತದ್ವಪುಷೇ" "ತಾಂ ಸುತೇ ಕೀರ್ತಿಂ", "ಭೂಷನ್ನ ಯೋಧಿ" ಮೊದಲಾದ ಅನೇಕ ವೇದಸೂಕ್ತಗಳಿಂದ ಪ್ರತಿಪಾದ್ಯರು ಶ್ರೀ ವಾಯುದೇವರು ಹಾಗೂ ಅವರ ಅವತಾರರಾದ ಶ್ರೀ ಮಧ್ವಾಚಾರ್ಯರು ಎಂದು ಘಂಟಾಘೋಷವಾಗಿ ಹೇಳಿದ್ದಾರೆ. (ಭಾವಪ್ರಕಾಶಿಕಾ)

"ವೇದಿಷದೆ", "ಬಳಿತ್ಥಾ", "ಯುವಾಸುವಾಸ" "ಇದಂತೇ ಪಾತ್ರಂ" "ಸಪ್ತಸ್ವಸೃ" ಮೊದಲಾದ 75ಕ್ಕೂ ಹೆಚ್ಚು ವೇದಮಂತ್ರಗಳು ಶ್ರೀವಾಯುದೇವರ ಅವತಾರಗಳನ್ನು

ಕೊಂಡಾಡುತ್ತಿವೆ. ಇದರಿಂದ ಶ್ರೀಮಧ್ವಾಚಾರ್ಯರು ಶ್ರೀವಾಯುದೇವರ ಅವತಾರರೆಂದು ತಿಳಿದು ಬರುತ್ತದೆ. ಇದರ ಯಾವ ಪರಿಚಯವಿಲ್ಲದೆ ಕೇವಲ ಪೂರ್ವಾಗ್ರಹ ಹಾಗೂ ಪ್ರತೀಕಾರ ಮನೋಭಾವದಿಂದ "ಮಾಣಿಕ್ಯಮಂಜರಿ"ಕಾರರು ಶ್ರೀಮಧ್ವಾಚಾರ್ಯರ ಬಗ್ಗೆ ಅವಹೇಳನಕಾರಿ ಮಾತುಗಳನ್ನು ಆಡಿರುವರೆಂಬುದು ಸ್ಪಷ್ಟ.

ಶ್ರೀಮಧ್ವಾಚಾರ್ಯರ ವಿನಮ್ರ ಭಕ್ತರಿಗೆ ಅವರ ವೇದೋಕ್ತ ಮಹಿಮೆಯ ಪರಿಚಯವಾಗಲೆಂದು "ತಾಂ ಮಂತ್ರವರ್ಣೈಃ" ಎಂಬ ಪಂಡಿತಾಚಾರ್ಯರ ವಾಣಿಯನ್ನು ಅನುಸರಿಸಿ "ಗೋಮಂಜರಿ" ಗ್ರಂಥದಲ್ಲಿ 75 ವೇದ ಮಂತ್ರಗಳಿಗೆ ವಾಯುಪರವಾಗಿರುವ ಅರ್ಥಗಳನ್ನು ತೋರಿಸಲಾಗಿದೆ. ಒಂದೊಂದು ಮಂತ್ರವೂ ಶ್ರೀಮಧ್ವಾಚಾರ್ಯರ ಒಂದೊಂದು ಗುಣಗಳನ್ನು ವರ್ಣಿಸುತ್ತದೆ. "ಯೇ ಯೇ ಗುಣಾನಾಮ ಜಗತ್ಪಸಿದ್ಧಾಃ ಯಂ ತೇಷು ತೇಷುಸ್ಮ ನಿದರ್ಶಯಂತಿ" ಎಂಬ "ಸುಮಧ್ವ ವಿಜಯ" ದ ಉಲ್ಲೇಖಕ್ಕೆ ಇದು ಆಧಾರವಾಗಿದೆ. ಯಾವ ಯಾವ ವೇದಮಂತ್ರಗಳು ಶ್ರೀ ಮಧ್ವರ ಯಾವ ಯಾವ ಗುಣಗಳನ್ನು ಕೊಂಡಾಡುತ್ತಿವೆ ಎಂಬುದನ್ನು ಅನುಕ್ರಮಣಿಕಾದಲ್ಲಿ ಕೊಡಲಾಗಿದೆ. ಹಾಗೂ ಎಲ್ಲ ವೇದಗಳಿಗೆ ಪದಪಾಠ ಹಾಗೂ ಪ್ರತಿಪದಾರ್ಥಗಳನ್ನು ಸಂಸ್ಕೃ ತ ಆವೃತ್ತಿಯಲ್ಲಿ ಕೊಡಲಾಗಿದೆ. ಸಂಸ್ಕೃತ ಭಾಷಾ ಪರಿಚಯವಿಲ್ಲದ ಸಾಮಾನ್ಯ ಜನರ ಅನುಕೂಲಕ್ಕಾಗಿ ಕೆಲವು ಆಯ್ದ ವೇದ ಭಾಗಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

1. "ವೇದಿಷದೆ ಪ್ರಿಯಧಾಮಾಯ" - ಶ್ರೀಮಧ್ವಾಚಾರ್ಯರ ಸರ್ವದಾ ನಾರಾಯಣ ಸನ್ನಿಹಿತತ್ವ ಹಾಗೂ ಅವರ ಸರ್ವದಾ ಭಗವದ್ವಿಷಯಕ ಜ್ಞಾನವತ್ವ
2. "ಭೂಷನ್ನ ಯೋಧಿ" - ಸರ್ವವಾಕ್ಯ ವ್ಯವಸ್ಥಾಪಕತ್ವ (ಭಗವಂತನಲ್ಲಿ ಸಮನ್ವಯತ್ವ)
3. "ತಮುಗ್ರುವಃ" - ಸಜ್ಜನರಿಗೆ ಲಿಂಗದೇಹ ಭಂಗಕತ್ವ
4. "ಇದಮಗ್ನೆ" - ಮೋಕ್ಷಾದಿ ಪುರುಷಾರ್ಥ ಪ್ರದಾತೃತ್ವ
5. "ಸ ಸಂಸ್ಥಿರಃ" - ಅಜ್ಞಾನಾದಿ ದೋಷಶೂನ್ಯತ್ವ
6. "ತಾಂ ಸುತೇ ಕೀರ್ತಿಂ" - ಸಜ್ಜನ ಉಪದೇಶಕತ್ವ

7. "ತ್ವಂ ವಿಶ್ವಾ" - ಅಪೇಕ್ಷಿತ ದಾತೃತ್ವ

8. "ಉಚ್ಚಯಸ್ಯ" - ಅವತಾರಗಳಲ್ಲೂ ಜ್ಞಾನಹ್ರಾಸಾಭಾವವತ್ವ

9. "ಜಾತೇ ಜಾಯತೇ" - ವಾಯುದೇವರ ಬ್ರಾಹ್ಮಣ ಮಧ್ವರೂಪದ ಪ್ರಾದುರ್ಭಾವ ಕಥನ

10. "ಸಪ್ತಸ್ವಸ್ರೃ" - ಸರ್ವದಾ ಸರ್ವವಿದ್ಯಾಧಾರಕತ್ವ

11. "ಪ್ರಧಾರ ಮಧ್ವೋ" - ಸರ್ವದೇವತಾ ವಂದ್ಯತ್ವ

12. "ಸ ಪೂರ್ವ್ಯಃ" - ಪಂಚಭೇದ ಪ್ರತಿಪಾದಕ ಶಾಸ್ತ್ರ ನಿರ್ಮಾಣಕತ್ವ ಇತ್ಯಾದಿಗಳು

## ವೇದಗಳ ವಾಯುಪರ ಅರ್ಥ

ವೇದಿಷದೆ ಪ್ರಿಯಧಾಮಾಯ ಸುದ್ಯುತೇ ಧಾಸಾಮಿವ ಪ್ರಭರಾ ಯೋನಿಮಗ್ನಯೇ।
ವಸ್ತ್ರೇಣೇವ ವಾಸಯಾ ಮನ್ಮನಾ ಶುಚಿಂ ಜ್ಯೋತಿರಥಂ ಶುಕ್ರವರ್ಣಂ ತಮೋಹನಂ॥

1. ವೇದಿಷದೆ - ವೇದ ಪರಿಪೂರ್ಣರಾದ್ದರಿಂದ ವೇದಿ, ವೇದವ್ಯಾಸರು. ಅವರ ಸಮೀಪಕ್ಕೆ ಹೋಗುವವರಾದ ಅಥವಾ ತತ್ವಜ್ಞಾನ ಸ್ವರೂಪರಾದ ವೇದವ್ಯಾಸರ ಬಳಿಯಲ್ಲಿ ಸರ್ವದಾ ಇರತಕ್ಕವರಾದ

2. ಪ್ರಿಯಧಾಮಾಯ - ಅತ್ಯಂತ ಪ್ರಿಯನಾದ ನಾರಾಯಣನನ್ನು ಸರ್ವದಾ ಹೃದಯಲ್ಲಿ ಧರಿಸಿರುವವರಾದ ಅಥವಾ ಸರ್ವದಾ ಭಗವದ್ವಿಷಯಕ ಜ್ಞಾನವುಳ್ಳವರಾದ

3. ಸುದ್ಯುತೇ - ಪೂರ್ಣವಾದ ಪ್ರಜ್ಞೆಯಿಂದ ಕೂಡಿರುವವರಾದ ಅಥವಾ ಶೋಭನ ಪ್ರಕಾಶ ವಿಶಿಷ್ಠರಾದ

4. ಅಗ್ನಯೇ - ಸರ್ವದೇವತಾ ಪ್ರೇರಕರಾದ

5. ಯೋನಿಂ - ತತ್ವಜ್ಞಾನರೂಪ ಆಸನವುಳ್ಳರಾದ

6. ಶುಚಿಂ - ಪರಿಶುದ್ಧರಾದ, ಸ್ನಾನಾದಿಗಳಿಂದ ಪೂಜಿತರಾದ

7. ಶುಕ್ರವರ್ಣಂ - ಪರಶುಕ್ಲತ್ರಯರಲ್ಲಿರುವದರಿಂದ ಪರಮಸಾತ್ವಿಕರಾದ

8. ತಮೋಹನ್ - ಮಿಥ್ಯಾಜ್ಞಾನಾದಿದೋಷರಹಿತರಾದ ಅಥವಾ ದೈತ್ಯರನ್ನು ಅಂಧತಮಸ್ಸಿಗೆ ಹಾಕುವವರಾದ

9. ಜ್ಯೋತಿರಥಂ - ಜ್ಞಾನವೆಂಬ ರಥವುಳ್ಳವರಾದ ಶ್ರೀಮಧ್ವಾಚಾರ್ಯರನ್ನು

10. ಮನ್ಮನಾ - ಮನೋಹರವಾದ ಅಥವಾ ಉಪಾಸನೆಗಳಿಂದ

11. ವಸ್ತ್ರೇಣ - ವಸ್ತ್ರವಿಶೇಷಗಳಿಂದ ಅಥವಾ ಮನನಾದಿ ಪೂಜಾದಿಗಳನ್ನು ಮಾಡತಕ್ಕದ್ದು.

ಇಂತಹ ಪೂಜಾಗಳಿಂದ ಪ್ರೀತರಾದ ಅವರು ನನ್ನಲ್ಲಿ ವಾಸಯ ನೆಲೆಸಲಿ ಎಂದು ಅರ್ಥ

**ಏಕಃ ಸಮುದ್ರೋ ಧಾರುಣೋ ರಯೀಣಾಮಸ್ಮದ್ಧೃದೋ ಭೂರಿಜನ್ಮ ವಿಚಷ್ಟೆ ।**
**ಸಿಷಕ್ತ್ಯೋರ್ಧಾನಿಣ್ಯೋರಪಸ್ಥೆ ಉತ್ಸಸ್ಯ ಮಧ್ಯೆ ನಿಹಿತಂ ಪದಂ ವೈಃ ॥**

ಸಕಲದೇವತಾ ಮುಖ್ಯರೂ, ಜಗಚ್ಚೇಷ್ಟಾಪ್ರದರೂ, ಅಪಾರ ಜ್ಞಾನವುಳವರೂ ಹನುಮಭೀಮ ಮಧ್ವಾಖ್ಯ ಅವತಾರಗಳಲ್ಲಿ ಭಕ್ತರಿಗೆ ಸಕಲ ಮನೋಭೀಷ್ಟಗಳನ್ನು ಕೊಡುವ ವ್ಯಾಪಾರಗಳನ್ನು ಮಾಡುವವರು (ಭಕ್ತರಿಗೆ ಇಷ್ಟಕರವಾದ ಹೃದಯಂಗಮ ವೇದ, ಶಾಸ್ತ್ರ ಸೂಕ್ತ ವಾಖ್ಯಾನಗಳನ್ನು ಮಾಡುವವರು) ಶ್ರೀ ಮಧ್ವಾವತಾರರೂ, ತ ತಮ್ಮ ಹೃದಯಗುಹೆಯಲ್ಲಿ ವಿರಾಜಮಾನನಾಗಿರುವ ಶ್ರೀ ನಾರಾಯಣನನ್ನು ಸರ್ವದಾ ಸ್ತುತಿಸುತ್ತಿರುವವರೂ ಆದ ಶ್ರೀ ಮುಖ್ಯಪ್ರಾಣದೇವರು, "ಯತೋವಾಚೋ ನಿವರ್ತಂತೆ ಅಪ್ರಾಪ್ಯಮನಸಾ ಸಹ" ಎಂಬ ಶ್ರುತಿರೀತ್ಯಾ ಯಾರಿಂದಲೂ ಸಾಕಲ್ಯೇನ ತಿಳಿಯಲು ಅಶಕ್ಯನಾದ ಶ್ರೀ ವಿಷ್ಣುವಿನ ತೊಡೆಯ ಮೇಲೆ ವಿರಾಜಮಾನರಾಗಿ ಅವನ ಸೇವೆಯನ್ನು ಮಾಡುತ್ತಿರುತ್ತಾರೆ.

ಈ ವಿಷಯ "ತಂತ್ರಸಾರ"ದಲ್ಲಿ ಹೇಗೆ ಹೇಳಿದೆ.

**"ಉದ್ಯದ್ರವಿಪ್ರಕರಸನ್ನಿಭಮಚ್ಯುತಾಂಕೆ ಸ್ವಾಸೀನಮಸ್ಯ ನುತಿನಿತ್ಯವಚಃ ಪ್ರವೃತ್ತಿಂ ಧ್ಯಾಯೇದ್ಗದಾಭಯಕರಂ ಸುಕೃತಾಂಜಲಿಂ ತಂ ಪ್ರಾಣಂ ಯಥೇಷ್ಟ ತನು ಮುನ್ನತ ಕರ್ಮಶಕ್ತಿಂ"**

**ಋತಾಯಿನಿ ಮಾಯಿನಿ ಸಂ ದಧಾತೆ ಮಿತ್ವಾ ಶಿಶುಂ ಜಜ್ಞತುರ್ವ ಧಯಂತಿ ।**
**ವಿಶ್ವಸ್ಯ ನಾಭಿಂ ಚರತಃ ಧ್ರುವಸ್ಯ ಕವೇಶ್ಚಿತ್ ತಂತುಂ ಮನಸಾ ವಿಯಂತಃ ॥**

"ವಿಶ್ವಂ ಸತ್ಯಂ ಮಘವಾನ್" ಇತ್ಯಾದಿ ವಿಶ್ವಸತ್ಯ ಪ್ರತಿಪಾದಕ ಷ್ರುತಿಗಳು ಆಪಾತತಃ ಜಗನ್ಮಿಥ್ಯಾತ್ವ ಪ್ರತಿಪಾದಕ ಶ್ರುತಿಗಳು ಶ್ರೀಮಧ್ವಾವತಾರ. ಪರ್ಯಂತ ಯಾವ ವಚನದಿಂದಲೂ ಕೂಡ ವಿರೋಧವನ್ನು ಬಿಡಲಿಲ್ಲ. ಅವು ಕೆಲವರಿಗೆ ಸಂದೇಹ, ಕೆಲವರಿಗೆ ವಿಪರೀತ ಜ್ಞಾನವನ್ನು ಹುಟ್ಟಿಸಿದವು. ಅಂದರೆ ಯಾರಿಗೂ ಸರಿಯಾದ ಜ್ಞಾನವಾಗಲಿಲ್ಲ. ಹೀಗಿರುವಾಗ ಶ್ರೀಮಧ್ವಾಚಾರ್ಯರು ಅವತಾರ ಮಾಡಿ, ಸಕಲಸ್ಥಾವರಜಂಗಮಾತ್ಮಕವಾದ ಜಗತ್ತಿಗೆ ಸೃಷ್ಟ್ಯಾದಿ ಅಷ್ಟ ಕರ್ತೃವಾದ ಶ್ರೀ ನಾರಾಯಣನ ಅಭಿಪ್ರೇತಾರ್ಥವನ್ನು ನಿರೂಪಿಸುವ ಶಾಸ್ತ್ರಗಳನ್ನು ಮಾಡಿದರು. ಅಂದರೆ ತಮ್ಮ ವ್ಯಾಖ್ಯಾನಗಳಿಂದ ಶೃತಿಗಳ ವಿರೋಧವನ್ನು ಪರಿಹರಿಸಿದರು. ಆದರಿಂದ ಶ್ರೀ ಮಧ್ವಾಚಾರ್ಯರ ಕೀರ್ತಿಲೋಕದಲ್ಲಿ ಅಪಾರವಾಗಿ ಹರಡಿತು.

ಇಂತಹ ಹರಿಸರ್ವೋತ್ತಮ ಜಗತ್ಸತ್ಯತ್ವ ಪ್ರತಿಪಾದಕ ಶಾಸ್ತ್ರಕರ್ತಾರರಾದ ಶ್ರೀ ಮುಖ್ಯಪ್ರಾಣಾವತಾರರಾದ ಶ್ರೀ ಮಧ್ವಾಚಾರ್ಯರನ್ನು ನಾನು ಮನಸಾ ಸಮೀಪಿಸುತ್ತೇನೆ. ಅಂದರೆ ಯಥಾರ್ಥ ಶ್ರುತ್ಯರ್ಥ ಪ್ರಕಾಶಕರಾದ ಶ್ರೀಮಧ್ವಾಚಾರ್ಯರು ನನ್ನ ಮನಸ್ಸಿನಲ್ಲಿ ನೆಲೆಸಲಿ. ಅಂದರೆ ಅವರ ಅನುಗ್ರಹದಿಂದ ನಮಗೆ ಸರ್ವ ಶ್ರುತಿಗಳ ಯಥಾರ್ಥವಾಗಲಿ ಎಂದು ಭಾವ.

## ಅಕ್ಷೋಭ್ಯತೀರ್ಥ - ವಿದ್ಯಾರಣ್ಯರ ವಾದ - ವಿದ್ಯಾರಣ್ಯರ ಪರಾಜಯ

"ಮಾಣಿಕ್ಯ ಮಂಜರಿ"ಕಾರರು ತಮ್ಮ ಗ್ರಂಥದ 4ನೇ ಅಧ್ಯಾಯದಲ್ಲಿ ವಿದ್ಯಾರಣ್ಯರ ಚರಿತ್ರೆಯನ್ನು ವರ್ಣಿಸುವ ಸಮಯದಲ್ಲಿ, ದಿಗ್ವಿಜಯಕ್ಕಾಗಿ ಹೊರಟ ಮಾಧವಾಚಾರ್ಯರು ಮಧ್ವ ಶಿಷ್ಯರಾದ ಅಕ್ಷೋಭ್ಯ ಭಿಕ್ಷುವನ್ನು ನೋಡಿ ಅವರನ್ನು ಗೆಲ್ಲಲು ಇಚ್ಚಿಸಿದರು. ನಂತರ ಅವರಿಬ್ಬರಲ್ಲಿ ವಾದ ನಡೆಯಿತು. ಮೊದಲು ಶಿವ ಸರ್ವೋತ್ತಮತ್ವ ಅಸಹನರಾದ ಅಕ್ಷೋಭ್ಯರು ಸ್ಕಾಂದಾದಿ ಪುರಾಣಗಳನ್ನು ತಾಮಸ ಎಂದು ಹೇಳಿದರು. ಆಗ ವಿದ್ಯಾರಣ್ಯರು ಅದು ಸರಿಯಲ್ಲ, ತಾಮಸ ಪುರಾಣದ ವಾಕ್ಯಗಳನ್ನು ನಿಮ್ಮ ಆಚಾರ್ಯರೇ ಭಾಷ್ಯದಲ್ಲಿ ಸ್ವೀಕಾರ ಮಾಡಿರುವುದರಿಂದ ನಿಮಗೆ ಸ್ವಮತ ವಿರೋಧ ಬರುತ್ತದೆ, ಇತ್ಯಾದಿ ಹೇಳಿ ಅವರನ್ನು ಪರಾಜಿತರನ್ನಾಗಿ ಮಾಡಿದರು ಎಂದು ಹೇಳಿದ್ದಾರೆ.

ಮಣಿಮಂಜರಿಕಾರರ ಪ್ರಕಾರ ಮಾಧವಾಚಾರ್ಯರೇ (ವಿದ್ಯಾರಣ್ಯರಲ್ಲ, ನೆನಪಿರಲಿ) ಅಕ್ಷೋಭ್ಯತೀರ್ಥರನ್ನು ಸೋಲಿಸಿದ್ದು. ಸೋತ ಅಕ್ಷೋಭ್ಯರು ಹೃದ್ರೋಗವನ್ನು ಹೊಂದಿ ಮಾರ್ಗಶಿರ ಬಹುಳ ಪಂಚಮಿಯಂದು ಮರಣ ಹೊಂದಿದರು ಎಂದು ಅವರ ಹೇಳಿಕೆ.

ಇವೆಲ್ಲವೂ ಪೂರ್ವಾಗ್ರಹ ಪೀಡಿತರಾಗಿ ಬರೆದಿರುವುದೆಂದು ಮೇಲ್ನೋಟಕ್ಕೇ ಸ್ಪಷ್ಟವಾಗಿ ಕಾಣುತ್ತದೆ.

ಇನ್ನು ಇತಿಹಾಸ ಪ್ರಸಿದ್ಧವಾದ ಅಕ್ಷೋಭ್ಯತೀರ್ಥ - ವಿದ್ಯಾರಣ್ಯರ "ತತ್ವಮಸಿ" ವಾದವನ್ನು"ಮಣಿಕ್ಯ ಮಂಜರಿ"ಕಾರರು ಶುದ್ಧ ಕಟ್ಟುಕತೆಯೆಂದು ವರ್ಣಿಸಿದ್ದಾರೆ. ಅವರ ಪ್ರಕಾರ ಅಕ್ಷೋಭ್ಯತೀರ್ಥರು ವಾದ ಮಾಡಿದ ಸಮಯದಲ್ಲಿ ವಿದ್ಯಾರಣ್ಯರು ಇನ್ನೂ ಗೃಹಸ್ಥಾಶ್ರಮಿಗಳಾಗಿ, ಮಾಧವಾಚಾರ್ಯರಾಗಿದ್ದರು. ವಿದ್ಯಾರಣ್ಯರಾಗಿರಲಿಲ್ಲ. ಅಂದ ಮೇಲೆ ಈ ವಾದ ನಡೆಯಲು ಸಾಧ್ಯವೇ ಇಲ್ಲ. ಆದ್ದರಿಂದ,

**"ಅಸಿನಾ ತತ್ವಮಸಿನಾ ಪರಜೀವ ಪ್ರಭೇದಿನಾ**
**ವಿದ್ಯಾರಣ್ಯಮಹಾರಣ್ಯಮಕ್ಷೋಭ್ಯಮುನಿರಚ್ಛಿನತ್ "**

ಎಂಬ ಶ್ಲೋಕ ಪ್ರಕ್ಷಿಪ್ತ . ಯಾರೋ ಮಾಧ್ವರು ತಮ್ಮ ಗುರುಗಳ ಹಿರಿಮೆಯನ್ನು ಬಣ್ಣಿಸಲು ರಚಿಸಿರುವುದು ಎಂದು ಹೇಳಿದ್ದಾರೆ. ಅವರ ಪ್ರಕಾರ ಮಾಧವಾಚಾರ್ಯರು ವಿದ್ಯಾರಣ್ಯರಾಗಿದ್ದು, 90 ವರ್ಷಗಳ ನಂತರ, ಅದು ಹೇಗೆ ಮುಂದೆ ಸನ್ಯಾಸಿಯಾದ ಮೇಲೆ ಬರುವ ವಿದ್ಯಾರಣ್ಯ ಎಂಬ ಹೆಸರು ಈಗಲೇ ತಿಳಿಯುತ್ತದೆ ಎಂದು ಅವರ ಅಭಿಪ್ರಾಯ. ಅವರ ಪ್ರಕಾರ ವಿದ್ಯಾರಣ್ಯರು 150 ವರ್ಷಗಳ ಕಾಲ ಜೀವಿಸಿದ್ದರೆಂದು ತಿಳಿದು ಬರುತ್ತದೆ.

ಇದು ಶುದ್ಧ ಅಬದ್ಧ

ವಿದ್ಯಾರಣ್ಯರ ಕಾಲ ಹಾಗೂ ಜೀವಿತಾವಧಿಯ ಬಗ್ಗೆ ಅದ್ವೈತಿಗಳಲ್ಲೇ ಸಾಕಷ್ಟು ಗೊಂದಲವಿದೆ. ಕೆಲವರು 85 ವರ್ಷ ಬದುಕಿದ್ದರೆಂದು, ಕೆಲವರು 78 ಎಂದು, ಇನ್ನೂ ಕೆಲವರು ಶತಾಯುಷಿಗಳೆಂದೂ ಹೇಳುತ್ತಾರೆ. ಆದರೆ ಅವರು 150 ವರ್ಷಗಳ ಕಾಲ ಬದುಕಿದ್ದರೆಂದು ಯಾರೂ ಒಪ್ಪಿಲ್ಲ. ಆದ್ದರಿಂದ "ತತ್ವಮಸಿ", ವಾಕ್ಯಾರ್ಥದ ಬಗ್ಗೆ ರಘುನಾಥ ಸೂರಿಗಳ ಅಭಿಪ್ರಾಯ ತಪ್ಪು.

ಇತಿಹಾಸ ಪ್ರಸಿದ್ಧವಾದ ಈ "ತತ್ವಮಸಿ ವಾಕ್ಯಾರ್ಥ್ಯ" ಮುಳಬಾಗಿಲು ಸಮೀಪ ಹಂಚಕಲ್ಲು ಗುಡ್ಡದ ಬಳಿ ನಡೆಯಿತೆಂದು ಪ್ರಸಿದ್ದ ವಿಶಿಷ್ಠಾದ್ವೈತ ಪಂಡಿತರಾದ ಶ್ರೀ ವೇದಾಂತದೇಶಿಕರು ತೀರ್ಪುಗಾರರಾಗಿದ್ದರೆಂದು, ಅವರು ವಾದದಲ್ಲಿ ಶ್ರೀ ಅಕ್ಷೋಭ್ಯ ತೀರ್ಥರು ಜಯಶಾಲಿಗಳೆಂದು ತೀರ್ಪು ನೀಡಿದರೆಂದು ಅನೇಕ ಗ್ರಂಥಗಳಲ್ಲಿ ತಿಳಿದು ಬರುತ್ತದೆ.

ಶ್ರೀ ಮದಕ್ಷೋಭ್ಯತೀರ್ಥರ ಚರಮ ಶ್ಲೋಕವಾದ -
"ಯೋ ವಿದ್ಯಾರಣ್ಯ ವಿಪಿನಂ ತತ್ವಮಸ್ಯಸಿನಾಚ್ಛಿನತ್
ಶ್ರೀ ಮದಕ್ಷೋಭ್ಯ ತೀರ್ಥಾಯ ನಮಃ ತಸ್ಮೈ ಮಹಾತ್ಮನೇ "
ಎಂಬ ಶ್ಲೋಕ ಇದನ್ನು ಸ್ಪಷ್ಟಪಡಿಸುತ್ತದೆ.

"ರಾಘವೇಂದ್ರ ವಿಜಯ" ಕರ್ತೃಗಳಾದ ಶ್ರೀ ಲಕ್ಷ್ಮೀನಾರಾಯಣಾಚಾರ್ಯರು
**ಧೃಢಾಸೀನಾ ತತ್ವಮಸೀತಿವಾಚಾಸಾಮರ್ಥ್ಯ ಭಾಜಾ ಪರಜೀವ ಭೇದೆ**

"ಅವೈದಿಕಾಗ್ರ್ಯಂ ಮುನಿರೇಷ ವಿದ್ಯಾರಣ್ಯಂ ಶರಣ್ಯಂ ಕುದೃಶಾಂಬಿಭೇದ"
ಎಂಬುದಾಗಿ ಸ್ಪಷ್ಟ ನುಡಿಗಳಿಂದ ಹೇಳಿದ್ದಾರೆ.

ಇದಲ್ಲೆಕ್ಕೂ ಕಳಸವಿಟ್ಟಂತೆ,

"ಶ್ರೀ ವೇದಾಂತದೇಶಿಕ ಚಂಪೂ " ಎಂಬ ವಿಶಿಷ್ಟಾದ್ವೈತ ಗ್ರಂಥದಲ್ಲಿ

"ಅಸಿನಾ ತತ್ವಮಸಿನಾ" ಎಂಬ ಶ್ಲೋಕ ಉಲ್ಲೇಖವಾಗಿದ್ದು, ಅದರ ಮೂಲ ಪ್ರತಿಯ ನಕಲನ್ನು ಯಥಾವತ್ತಾಗಿ ಸಂಸ್ಕೃತ ವಿಭಾಗದಲ್ಲಿ ಕೊಡಲಾಗಿದೆ.

ಇದೆಲ್ಲವನ್ನೂ ದುರಾಗ್ರಹರಹಿತ ಶುದ್ಧ ಮನಸ್ಸಿನಿಂದ ವಿಚಾರ ಮಾಡಿದಾಗ -

ಶ್ರೀ ಅಕ್ಷೋಭ್ಯತೀರ್ಥ - ವಿದ್ಯಾರಣ್ಯರ ಪ್ರಸಿದ್ಧ "ತತ್ವಮಸಿ" ವಾಕ್ಯಾರ್ಥ

ನಡೆದಿದ್ದು ಹಾಗೂ ಶ್ರೀ ವಿದ್ಯಾರಣ್ಯರ ಪರಾಜಯ, ಐತಿಹಾಸಿಕ ಸತ್ಯವೆಂದು ಹಾಗೂ ಇದನ್ನು ಯಾವ ಕಾರಣದಿಂದಲೂ ಮುಚ್ಚಿ ಹಾಕಲು ಸಾಧ್ಯವಿಲ್ಲವೆಂದು ತಿಳಿದು ಬರುತ್ತದೆ.

# "ತತ್ವಮಸಿ" ವಾಕ್ಯಾರ್ಥ ವಿಚಾರ

ಛಾಂದೋಗ್ಯೋಪನಿಷತ್‌ನ ಉಪಕ್ರಮದಲ್ಲಿ "ಏನಾ ಶ್ರುತಂ ಶ್ರುತಂ ಭವತಿ". ಅಂದರೆ ಯಾವುದನ್ನು ಶ್ರವಣ ಮಾಡುವುದರಿಂದ ಶ್ರವಣ ಮಾಡದ ಎಲ್ಲಾ ಪದಾರ್ಥಗಳೂ ಶ್ರವಣ ಮಾಡಿದಂತೆ ಆಗುತ್ತದೆಯೋ ಎಂಬ ವಾಕ್ಯವು "ಅನನ್ಯಲಭ್ಯ ಅದ್ವೈತ ತತ್ವ" ವಿಷಯಕವಾಗಿದೆ. "ಏಕ ವಿಜ್ಞಾನೇನ ಸರ್ವ ವಿಜ್ಞಾನಂ " ಪ್ರತಿಜ್ಞೆಯೂ ಕೂಡ, ಜೀವಬ್ರಹ್ಮರುಗಳಿಗೆ ವಾಸ್ತವಿಕ ಭೇದ ಸ್ವೀಕಾರ ಮಾಡಿದರೆ ಕೂಡುವುದಿಲ್ಲ. ಜೀವಜಡಾತ್ಮಕವಾದ ಪ್ರಪಂಚವು ಪರಮಾತ್ಮನಿಂದ ಭಿನ್ನವಾದ ಪಕ್ಷದಲ್ಲಿ, ಪರಮಾತ್ಮ ಜ್ಞಾನದಿಂದ ಜೀವಜಡಾತ್ಮಕ ಪ್ರಪಂಚದ ಜ್ಞಾನವು ಹೇಗಾಗುತ್ತದೆ ? ಒಂದು ವಸ್ತುವಿನ ಜ್ಞಾನದಿಂದ ಮತ್ತೊಂದು ವಸ್ತುವಿನ ಜ್ಞಾನವಾಗಬೇಕಾದರೆ ಅವುಗಳಿಗೆ ಅಭೇದ ಇದ್ದರೆ ಮಾತ್ರ ಸಾಧ್ಯ. ಆದ್ದರಿಂದ ಪ್ರಪಂಚ ಪರಮಾತ್ಮನಿಂದ ಭಿನ್ನ ಅಲ್ಲ. ಮೃತ್ಪಿಂಡದ ಜ್ಞಾನದಿಂದ ಹೇಗೆ ಮೃತ್ಪಿಂಡದ ಪರಿಣಾಮವಾದ ಘಟದ ಜ್ಞಾನ ಆಗುತ್ತದೆಯೋ ಹಾಗೆ ಪರಮಾತ್ಮನ ಜ್ಞಾನದಿಂದ ಬ್ರಹ್ಮ ವಿವೃತ್ತ ಜಗತ್ತಿನ ಜ್ಞಾನವಾಗುತ್ತದೆ. ಇಲ್ಲಿ ಉಪದಾನ ಉಪಧೇಯ ಭಾವವಿದೆ. ವಸ್ತುತಸ್ತು ಬ್ರಹ್ಮ ನಿರ್ವಿಕಾರನಾದರಿಂದ ಅವನಿಗೆ ಪರಿಣಾಮ ಇಲ್ಲ. ಆದ್ದರಿಂದ ವಿವರ್ತೋಪಾದಾನವನ್ನು ಸ್ವೀಕರಿಸಬೇಕು. ಅಂದರೆ ಜೀವಜಡಾತ್ಮಕವಾದ ಈ ಜಗತ್ತು ಬ್ರಹ್ಮನಲ್ಲಿ ಆರೋಪಿತವಾಗಿದೆ. ಹಾಗಾದರೆ ಮೃತ್ಪಿಂಡ ಘಟ ದೃಷ್ಟಾಂತವು ಹೇಗೆ ? ಎಂದರೆ, ಉಪಾದಾನ ಸ್ವರೂಪ ಜ್ಞಾನವಾದರೆ ತದಾತ್ಮ ಉಪಾಧೇಯ ಜ್ಞಾನವು ಆಗುವುದೆಂಬ ಅಭಿಪ್ರಾಯವನ್ನು ಹೇಳುವುದಕ್ಕಾಗಿ ಮಾತ್ರ ಈ ದೃಷ್ಟಾಂತ. ಬ್ರಹ್ಮನೇ ಜಗತ್ತಾಗಿ ಪರಿಣಮಿಸುತ್ತಾನೆ ಎಂದಲ್ಲ. ಒಟ್ಟಿನಲ್ಲಿ ಬ್ರಹ್ಮನಲ್ಲಿ ಈ ಜೀವಜಡಾತ್ಮಕವಾದ ಜಗತ್ತು ಆರೋಪಿತವಾಗಿದೆ. ಆದ್ದರಿಂದ ಬ್ರಹ್ಮ ಜ್ಞಾನದಿಂದ ಪ್ರಪಂಚದ ಜ್ಞಾನವು ಆಗುತ್ತದೆ. ಬ್ರಹ್ಮಸತ್ತಾ ವ್ಯತಿರಿಕ್ತ ಅನ್ಯ ಸತ್ತಾ ಇಲ್ಲದಿರುವುದರಿಂದ ಈ ವಾಕ್ಯವು ಜೀವಬ್ರಹ್ಮರ ಅಭೇದದಲ್ಲಿಯೇ ಪರ್ಯವಸಾನವಾಗುತ್ತದೆ ಎಂದು "ಮಾಣಿಕ್ಯ ಮಂಜರಿ"ಕಾರರ ಅಭಿಪ್ರಾಯ.

ಇದು ತಪ್ಪು.

( ಭೇದವಿಲ್ಲದಿದ್ದರೆ "ಏಕ ವಿಜ್ಞಾನೇನ ಸರ್ವ ವಿಜ್ಞಾನಂ" ಎಂಬುದು ಕೂಡುವುದೇ ಇಲ್ಲ. )

"ಏಕ ವಿಜ್ಞಾನೇನ ಸರ್ವ ವಿಜ್ಞಾನಂ" ಎಂಬುದು ಪರಿಣಾಮವಾದವನ್ನೂ ವಿವರ್ತವಾದವನ್ನೂ ಆಶ್ರಯಿಸಿಲ್ಲ ಕ್ಷೀರದ ಜ್ಞಾನದಿಂದ ಕ್ಷೀರ ಪರಿಣಾಮವಾದ

ಮೊಸರಿನ ಜ್ಞಾನವು ಆಗುವುದಿಲ್ಲ. ಹಾಗೆಯೇ ಅಧಿಷ್ಠಾನವಾದ ಶುಕ್ತಿಯ ಜ್ಞಾನದಿಂದ ಆರೋಪಿತವಾದ ರಜತದ ಜ್ಞಾನವು ಆಗುವುದಿಲ್ಲ.

ವಸ್ತುತಸ್ತು ಸಾದೃಶ್ಯಪ್ರಾಧಾನ್ಯಗಳನ್ನು ಆಶ್ರಯಿಸಿ ಇಲ್ಲಿ ದೃಷ್ಟಾಂತವನ್ನು ಕೊಡಲಾಗಿದೆ. ಮೃತ್ಪಿಂಡಜ್ಞಾನದಿಂದ ತತ್ಸದೃಶವಾದ ಘಟಾದಿಗಳ ಜ್ಞಾನವಾಗುತ್ತದೆ "ಸ್ತನಕೇಶವತಿ ಸ್ತ್ರೀ" ಎಂಬ ಲಕ್ಷಣದಿಂದ ಇವಳು ಸ್ತ್ರೀ ಎಂಬ ಜ್ಞಾನವಾಗುತ್ತದೆ. ಬೇರೆ ಸ್ತ್ರೀಯಲ್ಲಿ ಸಾದೃಶ್ಯವಿರುವುದರಿಂದ ಅವಳನ್ನು ನೋಡಿದ ಕೂಡಲೆ ಇವಳು ಸ್ತ್ರೀ ಎಂಬುದಾಗಿ ಉಪದೇಶವಿಲ್ಲದೇ ತಿಳಿಯುತ್ತದೆ.

ಅಥವಾ ಪ್ರಧಾನ ವಿಷ್ಣು ಜ್ಞಾನದಿಂದ ಅಪ್ರಧಾನ ಜಗತ್ತಿನ ಜ್ಞಾನವಾಗುತ್ತದೆ ಎಂದು ಇದರ ಅರ್ಥ. ಹಾಗಾದರೆ ಪ್ರಧಾನ ರಾಜನ ಜ್ಞಾನದಿಂದ ಅಪ್ರಧಾನ ಸೇವಕನ ಜ್ಞಾನವಾಗಲಿ ಎಂದರೆ ಅದು ಸರಿಯಲ್ಲ . ಪ್ರಧಾನ ಜ್ಞಾನದಿಂದ ಅಪ್ರಧಾನ ಜ್ಞಾನವಾಗುತ್ತದೆ ಎಂಬಲ್ಲಿ ನಮ್ಮ ಅಭಿಪ್ರಾಯ ಹೀಗೆ. ಇಲ್ಲಿ ವ್ಯಕ್ತಿ ಜ್ಞಾನ ಎಂದರ್ಥವಲ್ಲ. ಅಪ್ರಧಾನ ಜ್ಞಾನದಿಂದ ಏನು ಫಲವಾಗುತ್ತದೋ ಅದು ಪ್ರಧಾನ ಜ್ಞಾನದಿಂದ ಆಗುತ್ತದೆ ಎಂದರ್ಥ. ಇಲ್ಲಿ ಫಲಪರ್ಯಂತ ಅನುಧಾವನವಿದೆ. ಇದನ್ನು ಶ್ರೀ ಮಂತ್ರಾಲಯ ಸ್ವಾಮಿಗಳು ತಮ್ಮ ಅರ್ಥರ್ವಣೋಪನಿಷತ್ ವ್ಯಾಖ್ಯಾನದಲ್ಲಿ ವಿವರಿಸಿದ್ದಾರೆ. ಆದರಿಂದ "ಏಕ ವಿಜ್ಞಾನೇನ ಸರ್ವ ವಿಜ್ಞಾನಂ" ಎಂಬುದು ಭೇದಪರವಾಗಿದೆ.

ಹಾಗಾದರೆ ಇದು ಔಪಚಾರಿಕ ಪ್ರಯೋಗ ಎಂದಾಯಿತು. ಔ ಪಚಾರಿಕ ಪ್ರಯೋಗಕ್ಕೆ ಪ್ರಯೋಜನ ಇರಬೇಕು. ಇಲ್ಲಿ ಏನು ಪ್ರಯೋಜನ ಎಂದರೆ, ರೂಢವಾದಕ್ಕೆ ಪ್ರಯೋಜನಾಪೇಕ್ಷೆ ಇಲ್ಲ ಎಂದು. ನಮ್ಮ ಉತ್ತರ ಹಾಗಾದರೆ ಬ್ರಹ್ಮಜ್ಞಾನದಿಂದ ಸರ್ವಜ್ಞಾನ ಫಲಸಿದ್ಧಿ ಎಂಬ ವಿಷಯದಲ್ಲಿ ಪ್ರಮಾಣವೇನೆಂಬ ಆಕ್ಷೇಪ ಬಂದರೆ "ಜ್ಞಾನಾದೇವ ಸರ್ವೇ ಕಾಮಾಃ ಸುಂಪದ್ಯಂತೆ" ಎಂಬ ಶೃತಿಯೇ ಇದಕ್ಕೆ ಪ್ರಮಾಣ. ಆದ್ದರಿಂದ ನಮ್ಮ ಪಕ್ಷದಲ್ಲಿ ಯಾವ ದೋಷವು ಇಲ್ಲ. ಆದ್ದರಿಂದ ಸಾದೃಶ್ಯವಾಗಲೀ ಅಥವಾ ಪ್ರಾಧಾನ್ಯವಾಗಲಿ ಅವು ಭೇದ ಮಾತ್ರ ಸಾಪೇಕ್ಷವಾಗಿರುವುದರಿಂದ ಈ ಮಹಾಪ್ರಕರಣದ ಉಪಕ್ರಮವು ಅಭೇದದಲ್ಲಿ ತಾತ್ಪರ್ಯವನ್ನು ಹೊಂದಿಲ್ಲ ಎಂದು ಸಿದ್ಧವಾಗುತ್ತದೆ.

ಈ ರೀತಿಯಲ್ಲಿ "ತತ್ವಮಸಿ" ವಾಕ್ಯಕ್ಕೆ ಭೇದಭೋದಕತ್ವವನ್ನು ಅಂಗೀಕರಿಸಿದರೆ ಕೆಲವು ನವೀನರು ಈ ರೀತಿ ಆಕ್ಷೇಪಿಸುತ್ತಾರೆ.

"ಅನನ್ಯಲಭ್ಯೋ ಹಿ ಶಾಸ್ತ್ರಾರ್ಥಃ" - ಎಂಬ ನ್ಯಾಯದಂತೆ ಪ್ರಮಾಣವೆಂದು ಹೇಳಿಸಿಕೊಳ್ಳುವ ವೇದವು ಇತರ ಪ್ರಮಾಣಗಳಿಂದ ತಿಳಿದು ಬರದೇ ಇರುವ ಅರ್ಥವನ್ನೇ ತಿಳಿಸಬೇಕು. ಹೀಗಿರಲಾಗಿ ಪ್ರತ್ಯಕ್ಷದಿಂದ ಸಿದ್ಧವಾಗಿರುವ ಜೀವಬ್ರಹ್ಮರ ಭೇದವನ್ನು ಪುನಃ ಶಾಸ್ತ್ರಗಳು ಹೇಳುವ ಅವಶ್ಯಕತೆ ಏನು ? ಎಂಬುದಾಗಿ ಅವರ ಆಕ್ಷೇಪ.

ಇದು ಸರಿಯಲ್ಲ. ಇತರ ಪ್ರಮಾಣಗಳಿಂದ ತಿಳಿದು ಬರುವ ಅರ್ಥವನ್ನೇ ವೇದಗಳು (ಶಾಸ್ತ್ರಗಳು) ತಿಳಿಸಿದರೂ ಬಾಧಕವಿಲ್ಲ. ಅದ್ವೈತಿಗಳೂ ಸಹ ಅನುಮಾನದಿಂದ ತಿಳಿದು ಬರುವ ಐಕ್ಯವನ್ನು "ತತ್ವಮಸಿ" ಮೊದಲಾದ ವಾಕ್ಯಗಳು ತಿಳಿಸುತ್ತವೆ ಎಂದು ಒಪ್ಪಿದ್ದಾರೆ. ಇಲ್ಲದಿದ್ದಲ್ಲಿ "ಅಹಂ ಅಜ್ಞಃ" ಇತ್ಯಾದಿ ಪ್ರತ್ಯಕ್ಷ ಅನುಮಾನಗಳಿಂದ ತಿಳಿದು ಬರುವ ಅಜ್ಞಾನದ ವಿಷಯದಲ್ಲಿ "ಅದ್ವೈತಸಿದ್ಧಿ" ಮೊದಲಾದ ಗ್ರಂಥಗಳಲ್ಲಿ ಕೊಟ್ಟಿರುವ ಶ ಶ್ರುತಿಗಳು ಆಯುಕ್ತವಾಗುತ್ತದೆ. ಅನುಮಾನದಿಂದ ಸಿದ್ಧಿಯಾಗುವ ಜಗನ್ಮಿಥ್ಯಾತ್ವಕ್ಕೆ ಅದ್ವೈತಿಗಳು ಶ್ರುತಿಗಳನ್ನು ಉದಾಹರಿಸುತ್ತಾರೆ. ಅದರಂತೆಯೇ ಪ್ರತ್ಯಕ್ಷಾದಿಗಳಿಂದ ಸಿದ್ಧವಾದ ಭೇದವನ್ನು ವೇದಗಳು ತಿಳಿಸುತ್ತದೆ ಎಂದು ಹೇಳಿದರೆ ಬಾಧಕವಿಲ್ಲ. (ಹೆಚ್ಚಿನ ವಿವರಗಳಿಗೆ ಸಂಸ್ಕೃತಿ ಆವೃತಿಯನ್ನು ನೋಡಿ)

ತತ್ + ತ್ವಂ +ಅಸಿ ಎಂಬಲ್ಲಿ ತ್ವಂ ಪದದಿಂದ ಬೋಧ್ಯನಾದ ಅಲ್ಪಜ್ಞತ್ವಾದಿ ಧರ್ಮ ವಿಶಿಷ್ಟ ಚೇತನ (ಜೀವನಿಗೂ) ತತ್ ಪದದಿಂದ ಬೋಧ್ಯನಾದ ಸರ್ವಜ್ಞತ್ವಾದಿ ವಿಶಿಷ್ಟ ಬ್ರಹ್ಮನಿಗೂ ಐಕ್ಯ ಹೊಂದುವುದಿಲ್ಲವಾದ್ದರಿಂದ ಅದ್ವೈತಿಗಳು ಲಕ್ಷಣಾವೃತಿಯಿಂದ ಜೀವಚಿತ್ತಿನಲ್ಲಿರುವ ಅಲ್ಪಜ್ಞತ್ವಾದಿ ಧರ್ಮಗಳನ್ನು ಹಾಗೂ ಬ್ರಹ್ಮಚಿತ್ತಿನಲ್ಲಿರುವ ಸರ್ವಜ್ಞತ್ವಾದಿ ಧರ್ಮಗಳನ್ನು ಬಿಟ್ಟು ತ್ವಂ ಪದದಿಂದ ಕೇವಲ "ಚಿತ್" ಎಂಬ ಅರ್ಥವನ್ನು ಹಾಗೂ ತತ್ ಪದದಿಂದ ಕೇವಲ "ಚಿತ್" ಎಂಬ ಅರ್ಥವನ್ನು ಗ್ರಹಿಸಿ ಬ್ರಹ್ಮಚಿತ್ತಿಗೆ ಜೀವಚಿತ್ತಿನಿಂದ ಐಕ್ಯವನ್ನು ಅಸಿ ಎಂಬ ಪದವು ತಿಳಿಸುತ್ತದೆ. ಆದ್ದರಿಂದ "ತತ್ವಮಸಿ" ಎಂಬ ವಾಕ್ಯವು ಅಭೇದಪರವಾಗಿದೆ ಎಂದು ವಾದಿಸುತ್ತಾರೆ.

ಆದರೆ ಇದು ಸರಿಯಲ್ಲ.

ತ್ವಂ - ನೀನು ತತ್ - ಆ ಪರಮಾತ್ಮನ ಅಧೀನ ಅವನಿಂದ ನಿಯಮ್ಯ ಎಂದು ಒಂದು ಪದಕ್ಕೆ ಲಕ್ಷಣಾವೃತ್ತಿಯಿಂದ ಅರ್ಥವು ಹೊಂದುತ್ತಿರುವಾಗ ತತ್, ತ್ವಂ ಎರಡೂ ಪದಗಳಿಗೆ ಲಕ್ಷಣಾವೃತ್ತಿಯನ್ನು ಒಪ್ಪಿಕೊಳ್ಳುವುದು ಯುಕ್ತವಲ್ಲ.

ಅತತ್ +ತ್ವಂ +ಅಸಿ ಎಂದು ಪದಚ್ಛೇದ ಮಾಡಿ ತ್ವಂ - ನೀನು ಅತತ್ - ಬ್ರಹ್ಮನಿಂದ ಭಿನ್ನನಾಗಿದ್ದೀಯೇ ಎಂದು ಅರ್ಥಮಾಡಬೇಕು. (ಹೆಚ್ಚಿನ ವಿವರಗಳಿಗೆ ಸಂಸ್ಕೃತ ಆವೃತ್ತಿಯನ್ನು ನೋಡಿರಿ)

## ವಾಚಾರಂಭಣ ಶ್ರುತ್ಯರ್ಥ್ಯ ವಿಚಾರ

"ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ" ಎಂಬ ಶ್ರುತಿವಾಕ್ಯವೂ ಸಹ ಬ್ರಹ್ಮಾತಿರಿಕ್ತ ಸಮಸ್ತ ವಸ್ತುಗಳು ಮಿಥ್ಯಾ ಎಂದು ಭೋದಿಸುತ್ತದೆ ಎಂದು ಅದ್ವೈತಿಗಳು ಹೇಳುತ್ತಾರೆ. ಆ ವಾಕ್ಯವಾದರೋ ಮಣ್ಣಿನ (ಮೃತ್ತಿಕೆಯ) ವಿಕಾರವಾದ ಘಟಾದಿಗಳು ಮಿಥ್ಯಾ ಸುಳ್ಳಾದದ್ದು (ಕೇವಲ) ಶಬ್ದದಿಂದ ತಿಳಿದು ಬರುವುದೇ ಹೊರತು ವಸ್ತುವಲ್ಲ . (ಕೇವಲ) ಹೆಸರುಳ್ಳದ್ದು, ವಸ್ತುವಿಲ್ಲ. ಕಾರಣರೂಪವಾದ ಮತ್ತಿಕಾ ಸತ್ಯವಾದದ್ದು ಎಂದು ಅವರು ಹೇಳುತ್ತಾರೆ.

ಹಾಗಾದರೆ ಜಗತ್ತಿನಲ್ಲಿ "ಘಟ ಸತ್ಯ", "ಪಟವನ್ನು ತೆಗೆದುಕೊಂಡು ಬಾ" ಇತ್ಯಾದಿ ವ್ಯವಹಾರಗಳು ಹೇಗೆ ಉಂಟಾಗುತ್ತದೆ ಎಂದರೆ "ಮೃತ್ತಿಕೇತ್ಯೇವ ಸತ್ಯಂ" ಎಂದು ಮೃತ್ತಿಕಾತ್ಮನ ಘಟಶರಾವಾದಿಗಳು ಸತ್ಯವೇ ಹೊರತು ಸ್ವರೂಪದಿಂದಲ್ಲ ಎಂದರೆ,

**ಆಕ್ಷೇಪ** : ವಾಚಾರಂಭಣಂ ಪದಕ್ಕೆ ಸುಳ್ಳು ಎಂದು ಭೋದಕವಾದ ಮಿಥ್ಯಾತ್ವವನ್ನು ಹೇಗೆ ಹೇಳುವಿರಿ? ರೂಡಿಯಿಂದಲೋ, ಯೋಗದಿಂದಲೋ? ಮೊದಲನೆಯದಲ್ಲ ರೂಢಿಯಿಲ್ಲದಿರುವುದರಿಂದ (ರೂಢಿ ಎಂದು ಹೇಳುವ ವ್ಯಾಕರಣ ಕೋಶ ಅಭಾವವಿರುವುದರಿಂದ) ಆರಭ್ಯತೇ ಇತಿ ಆರಂಭಣಂ, ವಾಚಾಂ ಆರಂಭಣಂ ವಾಚಾರಂಭಣಂ ಎಂಬುದಾಗಿ ಯೋಗದಿಂದಲೂ ಮಿಥ್ಯಾತ್ವ ಅರ್ಥ ಬರುವುದಿಲ್ಲ ಎಂದು ನಾವು ಆಕ್ಷೇಪಿಸಿದರೆ,

ಅದ್ವೈತಿಗಳು "ವಾಚಾರಂಭಣಂ" ಈ ಪದದ ಮುಂದೆ "ಮಾತ್ರ" ಎಂಬ ಪದವನ್ನು ಸೇರಿಸಿಕೊಂಡು ಹಾಗೇ "ನಾಮಧೇಯಂ" ಪದದ ಮುಂದೆ "ಮಾತ್ರ" ಪದವನ್ನು ಸೇರಿಸಿಕೊಂಡರೆ ಕೇವಲ ಶಬ್ದ ಪ್ರತಿಪಾದ್ಯವೇ ಹೊರತು ಪದಾರ್ಥವಿಲ್ಲ. ಹಾಗೆಯೇ ಕೇವಲ ಹೆಸರೇ ಹೊರತು ಪದಾರ್ಥವಿಲ್ಲ ಎಂಬ ಅರ್ಥ ಬರುವುದರಿಂದ ಈ ವಾಕ್ಯವು ಕಾರ್ಯವಾದ ಜಗತ್ತಿಗೆ ಮಿಥ್ಯಾತ್ವವನ್ನು ಹೇಳುತ್ತದೆ ಎನ್ನುತ್ತಾರೆ.

ಆದರೆ ಇದು ಯುಕ್ತವಲ್ಲ ಏಕೆಂದರೆ,

1. "ವಾಚಾರಂಭಣಂ" ಈ ಶ್ರುತಿಯಲ್ಲಿ ಜಗತ್ತು ಮಿಥ್ಯಾ ಎಂದು ಹೇಳುವ ಪದವೇ ಇಲ್ಲ.

2. ವಾಚಾರಂಭಣಂ ಪದದ ಮುಂದೆ ಹಾಗೂ ನಾಮಧೇಯಂ ಪದದ ಮುಂದೆ ಮಾತ್ರ ಪದವನ್ನು ಸೇರಿಸಿಕೊಂಡಿರೆ "ಅಶ್ರುತಕಲ್ಪನಾ" ಎಂಬ ದೋಷ ಬರುತ್ತದೆ.

3. ಮೃತ್ತಿಕಾರೂಪ ಕಾರಣವು ಸತ್ಯವು ಮತ್ತು ಘಟಶರಾವಾದಿರೂಪ ಕಾರ್ಯವು ಸುಳ್ಳು ಹೀಗೆ ಈ ಶೃತಿಯು ಹೇಳುವುದೆಂದು ತಿಳಿದರೆ ಬ್ರಹ್ಮಾತಿರಿಕ್ತವಾದ ಮೃತ್ತಿಕೆಯೂ ಸಹ ಸತ್ಯವಾಗಬೇಕಾಗುವುದು. ಹೀಗಾದಲ್ಲಿ ಬ್ರಹ್ಮನೊಬ್ಬನೆ ಸತ್ಯ ಉಳಿದೆಲ್ಲ ಮಿಥ್ಯಾ ಎಂಬ ಅದ್ವೈತಿಗಳ ಹೇಳಿಕೆಗೆ ವಿರೋಧವಾಗುತ್ತದೆ. (ಅದ್ವೈತಹಾನಿ)

ಆದುದರಿಂದ ವಾಚಾರಂಭಣಂ ಶ್ರುತಿಯು ಜಗತ್ತಿನ ಮಿಥ್ಯಾತ್ವವನ್ನು ತಿಳಿಸಿಕೊಡುವುದೆಂಬುದು ಆಯುಕ್ತವು.

ಇಲ್ಲಿಗೆ "ಗೋಮಂಜರಿ" ಗ್ರಂಥದ ಸಂಕ್ಷಿಪ್ತ ಕನ್ನಡ ಭಾಷಾ ಸಾರಾಂಶವು ಮುಕ್ತಾಯವಾಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು ॥



---

**_Books available at :_**

**Sri Dwarakanathachar**
S-39, Kirloskar Colony, Basaveswaranagar, Bangalore - 560 079.

**Sri Holavanahalli Sreenivasachar**
83, "Parimala Nilaya", Shakambarinagar, Bangalore - 82. Phone : 2655 2514

**Sri K. Venkatesha Murthy**
Secretary, Sri Madhva Sangha (Srinagar), 764, "Sree Krishna",
Jalageramma Temple Street, Srinagar, Bangalore - 50. Phone : 2675 4122



पण्डितराज, पण्डितरत्नेत्यादि बहुबिरुदभाजां, न्यायामृतार्णवाभिनवशारदागमेत्यादि प्रौढानेक दुर्मतभञ्जनप्रबन्ध प्रणेतॄणां, श्रीमन्मध्वसिद्धान्तदीक्षादक्षाणां, प्रातःस्मरणीयानां प्रातःस्मरणीय श्रीमत्सत्यध्यानतीर्थश्रीचरणप्रियान्तेवासिनां, तत्सेवासमासादितनैकनैपुण्यानां, पुण्यतमनाम्नां, पाठप्रवचनैः पूतान्तेवासिनां, परमपूज्य श्रीजालिहाळोपाह्व श्रीश्रीनिवासाचार्याणां चरणनलिनयोर्निषेवणेन कृतविद्या, नित्यपाठप्रवचनदीक्षाः सुहृदां सुहृदो पं श्रीद्वारकानाथाचार्याः, दुर्मतमाणिक्यभेदिनी गो(वज्र)मञ्जरी, मणिमञ्जरीमण्डनाम् संग्रहं विधाय, सार्थकीकृतजनुषः सज्जनकल्याणकर कल्याणपुरीमधिवसन्तीति अहो भाग्यं तत्रत्यानाम् ॥